# ಕನ್ನಡ ವಿಶ್ವವಿದ್ಯಾನಿಲಯ ಹಂಪಿ



## "ಗೊರೂರರ ಪ್ರಬಂಧಗಳು"

ಕನ್ನಡ ಎಂ.ಫಿಲ್. ಪದವಿಗಾಗಿ ಸಾದರ ಪಡಿಸಿದ ನಿಬಂಧ



ನಿಬಂಧಕಾರರು

ಜ್ಯೋತಿ .ಕೆ.ಎಸ್.

ಕನ್ನಡ ಎಂ.ಫಿಲ್.

ಕನ್ನಡ ವಿಶ್ವವಿದ್ಯಾನಿಲಯ ಹಂಪಿ

ಶ್ರೀಕುವೆಂಪು ವಿದ್ಯಾವರ್ಧಕ ಟ್ರಸ್ಟ್.

ಮೈಸೂರು - ೫೭೦೦೦೯

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಮೈಸೂರು - ೫೭೦೦೦೯




ಜುಲೈ ೨೦೦೭

390

# ಕನ್ನಡ ವಿಶ್ವವಿದ್ಯಾನಿಲಯ ಹಂಪಿ



## "ಗೊರೂರರ ಪ್ರಬಂಧಗಳು"

ಕನ್ನಡ ಎಂ.ಫಿಲ್. ಪದವಿಗಾಗಿ ಸಾದರ ಪಡಿಸಿದ ನಿಬಂಧ




ನಿಬಂಧಕಾರರು

ಜ್ಯೋತಿ .ಕೆ.ಎಸ್.

ಕನ್ನಡ ಎಂ.ಫಿಲ್.

ಕನ್ನಡ ವಿಶ್ವವಿದ್ಯಾನಿಲಯ ಹಂಪಿ

ಶ್ರೀಕುವೆಂಪುವಿದ್ಯಾವರ್ಧಕ ಟ್ರಸ್ಟ್.

ಮೈಸೂರು - ೫೭೦೦೦೯





ಶ್ರೀ ಕುವೆಂಪುವಿದ್ಯಾವರ್ಧಕ ಟ್ರಸ್ಟ್

ಮೈಸೂರು - ೫೭೦೦೦೯

ಜುಲೈ ೨೦೦೨

# ದೃಡೀಕರಣ ಪತ್ರ

ಎಂ.ಫಿಲ್ ತರಗತಿಯ ವಿದ್ಯಾರ್ಥಿಯಾದ ಕೆ.ಎಸ್.ಜ್ಯೋತಿಯು ನನ್ನ ಮಾರ್ಗದರ್ಶನದಲ್ಲಿ **' ಗೊರೂರರ ಪ್ರಬಂಧಗಳು'** ಎಂಬ ನಿಬಂಧವನ್ನು ಎಂ.ಫಿಲ್ ತರಗತಿಯ ಕನ್ನಡ ಸಂಶೋಧನಾ ನಿಬಂಧ ಎಂಬ ಐದನೆ ಪತ್ರಿಕೆಯ ಭಾಗವಾಗಿ ಕನ್ನಡ ವಿಶ್ವವಿದ್ಯಾನಿಯಲಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ. ಈ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೋಮೊ, ಎಂ.ಫಿಲ್. ಅಥವಾ ಯಾವುದೇ ಪ್ರಶಸ್ತಿಗಾಗಲಿ ಅರ್ಪಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ಮೈಸೂರು

ದಿನಾಂಕ : 21/02/02

ಮಹೇಶ್ವರಿ

ಮಾರ್ಗದರ್ಶಕರು

ಡಾ|| ಮಹೇಶ್ವರಿ

ಜೆ.ಎಸ್.ಎಸ್.ಸ್ನಾತಕೊತ್ತರ ಕೇಂದ್ರ

ಚಾಮರಾಜನಗರ

# ಪ್ರಮಾಣ ಪತ್ರ

ಎಂ.ಫಿಲ್ ವಿದ್ಯಾರ್ಥಿಯಾದ ನಾನು **'ಗೊರೂರರ ಪ್ರಬಂಧಗಳು'** ಎಂಬ ವಿಷಯದ ಬಗೆಗೆ ನಡೆಸಿದ ಅಧ್ಯಯನದ ಫಲವೇ ಈ ನಿಬಂಧ.ಇದನ್ನು ಎಂ.ಫಿಲ್ ಪದವಿಯ ಕನ್ನಡ ಸಂಶೋಧನಾ ನಿಬಂಧ ಎಂಬ ಐದನೆ ಪತ್ರಿಕೆಯ ಭಾಗವಾಗಿ ಕನ್ನಡ ವಿಶ್ವ ವಿದ್ಯಾನಿಲಯಲಕ್ಕೆ ಒಪ್ಪಿಸಲು ಸಿದ್ಧಪಡಿಸಿರುತ್ತೇನೆ. ಇದನ್ನು ಈ ಮೊದಲು ಬೇರೆ ಯಾವುದೇ ವಿ.ವಿ ಗಳ ಪದವಿ , ಡಿಪ್ಲೊಮೊ ಎಂ.ಫಿಲ್ ಅಥವಾ ಯಾವುದೇ ಪ್ರಶಸ್ತಿಗಾಗಲಿ ಅರ್ಪಿಸಿಲ್ಲವೆಂದು ಈ ಮೂಲಕ ಪ್ರಮಾಣಿಕರಿಸಿರುತ್ತೇನೆ.

ಸ್ಥಳ : ಮೈಸೂರು
ದಿನಾಂಕ 21/02/07

ನಿಬಂಧಕಾರರು
ಜ್ಯೋತಿ. ಕೆ.ಎಸ್.
ಕನ್ನಡ ಎಂ.ಫಿಲ್.
ಕನ್ನಡ ವಿಶ್ವವಿದ್ಯಾನಿಲಯ, ಹಂಪಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಮೈಸೂರು.

# ಕೃತಜ್ಞತೆಗಳು

ಗೊರೂರರ ಪ್ರಬಂಧಗಳು ಎಂಬ ನಿಬಂಧರಚನೆಗೆ ಮಾರ್ಗದರ್ಶನ ಮತ್ತು ಸೂಕ್ತ ಸಲಹೆಗಳನ್ನು ನೀಡಿದ ನನ್ನ ಪೂಜ್ಯ ಗುರುಗಳಿಗೆ ( ಕುವೆಂಪು ವಿದ್ಯಾವರ್ದಕ ಟ್ರಸ್ಟ್ , ಮೈಸೂರು) ನನ್ನ ಅನಂತ ಕೃತಜ್ಞತೆಗಳು.

ಈ ನಿಬಂಧರಚನೆಗೆ ಇನ್ನೂ ಹೆಚ್ಚಿನ ರೀತಿಯಲ್ಲಿ ವಿಷಯ ಸಂಗ್ರಹಣೆಗೆ ಅಧ್ಯಯನಕ್ಕೆ ಪ್ರೋತ್ಸಾಹ ನೀಡಿದ ಸಂಸ್ಥೆಯ ಅಧ್ಯಾಪಕರಿಗೂ , ಹಿತೈಷಿಗಳಿಗೂ , ತಂದೆ, ತಾಯಿ ಹಾಗೂ ಸಹೋದರರಾದ ಪ್ರಸನ್ನ. ಕೆ.ಎಸ್.ಕುಮಾರ.ಕೆ.ಎಸ್. ಹಾಗೂ ನೆಚ್ಚಿನ ಸ್ನೇಹಿತೆ ಮಮತ , ಮಾರ್ಗದರ್ಶನ ನೀಡಿದ ಮಹೇಶ್ವರಿ ಮೇಡಂ ಇರವರಿಗೂ ನಾನು ಕೃತಜ್ಞಳಾಗಿದ್ದೇನೆ . ನಿಬಂಧ ರಚನೆಯ ಉತ್ಸಾಹಕ್ಕೆ ಸೂಕ್ತ ಸಲಹೆಸೂಚನೆ ನೀಡಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ನನ್ನ ಕೃತಜ್ಞತೆಗಳು .

# ಪರಿವಿಡಿ

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕನ್ನಡ ಸಾಹಿತ್ಯದಲ್ಲಿಯೇ ಮರೆಯಲಾರದ, ಮರೆಯಬಾರದ ಹೆಸರು ಗೊರೂರು ರಾಮಸ್ವಾಮಿ ಅಯ್ಯಾಂಗಾರರದು. ಒಳ್ಳೆಯ ಗ್ರಂಥಕರ್ತರೆಂದೂ ನಿರ್ಮಲ ಹಾಸ್ಯಗಾರರೆಂದೂ, ತರುಣರಿಗೂ, ಪ್ರೌಢರಿಗೂ ಮೆಚ್ಚುಗೆಯಾಗುವಂತೆ ಬರೆಯ ಬಲ್ಲವರೆಂದೂ ಕೀರ್ತಿಯನ್ನು ಪಡೆದವರು.

ಗ್ರಾಮಜೀವನದ ಚಿತ್ರಣವನ್ನು ಕಣ್ಣಿಗೆ ಕಟ್ಟುವಂತೆ ಬರಹದಲ್ಲಿ ಸೆರೆಹಿಡಿಯುವ ಅದ್ಭುತ ಕಲೆಗಾರಿಕೆಯನ್ನು ಮೈಗೂಡಿಸಿಕೊಂಡವರು. ಇವರ ಬರಹದಲ್ಲಿ ಹಾರುವ, ಹಜಾಮ, ತುರುಕ, ದಾಸಯ್ಯ, ದಲಿತ ಶಾನುಭೋಗ, ಬೆಸ್ತ, ಸುಬೇದಾರ, ಕಮ್ಮಾರ, ಕುಂಬಾರ, ಬಡಗಿ, ಒಕ್ಕಲಿಗ ಮುಂತಾದ ವರ್ಗದವರ ಬದುಕಿನಲ್ಲಿ ಹಾಸುಹೊಕ್ಕಾಗಿರುವ ಗುಣ–ದೋಷಗಳಿಗೆ ಭೇದಭಾವವಿಲ್ಲದೆ ಕನ್ನಡಿ ಹಿಡಿದಿದ್ದಾರೆ. ಜೊತೆಗೆ ಜನಪದ ಸಂಸ್ಕೃತಿಯ ಪ್ರತೀಕವಾದ ಬಯಲಾಟ, ಜಾತ್ರೆ, ಕಾಮನಹಬ್ಬ ಎಲ್ಲವೂ ಹಾಸುಹೊಕ್ಕಾಗಿವೆ.

ಗೊರೂರರ ಪ್ರಂಬಂಧವೊಂದಕ್ಕೆ ಬರೆದ ಮುನ್ನುಡಿಯಲ್ಲಿ ಬೇಂದ್ರೆಯವರು ಹೀಗೆ ಹೇಳಿದ್ದಾರೆ. "ಇಲ್ಲಿಯ ಬರಹದಲ್ಲಿ ಒಂದು ನಯವಾದ ಹಾಸ್ಯ ಹರಡಿಕೊಂಡಿದೆ. ಇಲ್ಲಿ ಕತೆಯಿದೆ, ಪಾತ್ರ ಸೃಷ್ಟಿಯಿದೆ, ನಗೆಯಿದೆ, ನೋವಿದೆ, ಬಣ್ಣನೆಯಿದೆ, ಬೂಟಾಟವಿದೆ, ಕಿರುಚಲ ಕಂಟೆಯ ಮೇಲೆ ಹರುಹಿದ ಇಲ್ಲಿಯ ಹಾಸ್ಯದ ಬಿಳಿಬಟ್ಟೆಯ ಕೆಳಗೆ ಯಾವ್ಯಾವ ಪ್ರಾಣಿಗಳು ಇರುವವ್ರೋ ಯಾರು ಹೇಳಬಹುದು? ದಫ್ತರ ಬಂದಿಯಿಂದ ಹೇಳಿಸಿದ ಶಾನುಭೋಗ ಪುರಾಣದಲ್ಲಿ ಸುಬೇದಾರಿಯ ದಶಾವತಾರಗಳೂ ಕುಣಿದಾಡಿ ಹೋಗಿವೆ. ಗೊರೂರರು ಹಾರುವರಾದ್ದರಿಂದ ಅವರಿಗೆ ಆ ಜಾತಿಯ ಸ್ವರೂಪವು ಚೆನ್ನಾಗಿ ತಿಳಿದಿದೆ. ಜೀವನದ ರೌದ್ರ, ಕರುಣ, ಭೀಭತ್ಸ, ಭಯಾನಕಗಳನ್ನು ಕುಸುರು–ಕುಸುರಾಗಿ ಅವರು ಮೂಡಿಸಿದ್ದಾರೆ. ಬೇರೆ ಕಿರುಕುಳ ಜೀವನವೂ ಅವರ ಕಣ್ಣಿಂದ ಅಡಗಿಕೊಂಡಿಲ್ಲ ಹೊಟ್ಟೆಯ ಹೋರಾಟವು ದೇವರ ಮುಸುಕನ್ನು ಹಾಕಿಕೊಂಡರೂ ಅವರ ಹಿಂದೆ ಹಾಸ್ಯದ ಪಂಜನ್ನು ಹಿಡಿದು ಅದರ ಬಿಂಬ ಸ್ವರೂಪ ದರ್ಶನವನ್ನು ಮಾಡಿಕೊಡುವ ಮಾತಿನ ಹದವು ಗೊರೂರರಲ್ಲಿದೆ.

ಗೊರೂರರಲ್ಲಿ ಅಳುತ್ತಿರುವವರನ್ನು ನಗಿಸುವಂತಹ ರಸಿಕತೆಯಿದೆ. ಜೀವನೋತ್ಸಾಹವನ್ನು ತುಂಬುವ ಶಕ್ತಿ ಅವರ ಬರಹಕ್ಕಿದೆ. ಗೊರೂರರನ್ನು ಶಿಷ್ಟ ಸಾಹಿತಿ ಎನ್ನುವುದಕ್ಕಿಂತ, ಜನಪದ ಸಾಹಿತಿ ಎಂಬುದಾಗಿ ಗುರುತಿಸಬಹುದು. ಏಕೆಂದರೆ ಕನ್ನಡದ ಗದ್ಯ ಸಾಹಿತ್ಯ ಕ್ಷೇತ್ರಕ್ಕೆ ಗ್ರಾಮ – ಜೀವನದ ಸತ್ತ್ವವನ್ನು ತುಂಬಿ ವೈವಿಧ್ಯತೆಯನ್ನು ತಂದವರಿವರು. ಗ್ರಾಮೀಣ ಪ್ರದೇಶದ ಜಾನಪದದ ಸೊಗಸನ್ನು, ಸಂಸ್ಕೃತಿಯನ್ನು ಅವರ ಎಲ್ಲಾ ಕೃತಿಗಳಲ್ಲಿಯೂ ಕಾಣಬಹುದು. ತಮ್ಮ ನಡೆ-ನುಡಿಗಳಲ್ಲಿ, ಆಚಾರ–ವಿಚಾರಗಳಲ್ಲಿ ಜನಪದ ಸಂಸ್ಕೃತಿಯನ್ನೂ, ವ್ಯಕ್ತಿತ್ವವನ್ನೂ ಉಳಿಸಿ-ಬೆಳೆಸಿಕೊಂಡು ಬಂದವರು.

ಗೊರೂರರು ಸಾಹಿತ್ಯವನ್ನು ರಚನೆ ಮಾಡಲು ಆರಂಭಿಸಿದ್ದು ತಾವು ಒಬ್ಬ ಸಾಹಿತಿ ಎಂಬುದನ್ನು ತೋರಿಸಬೇಕು ಎಂಬ ಅಹಂಕಾರದಿಂದಲ್ಲ. ಅವರು ಗಾಂಧೀ ಜೀವನದ ಚಿಂತನೆ-ತತ್ತ್ವಗಳನ್ನು ಆಳವಡಿಸಿಕೊಂಡು ರೂಪುಗೊಂಡವರು. ಆನಂತರ ಸಾಹಿತಿಯಾಗಿ ಅವರ ವ್ಯಕ್ತಿತ್ವ ಹೊರಹೊಮ್ಮಿದೆ. ಗೊರೂರರಲ್ಲಿ ಪರಂಪರೆ, ಪರಿವರ್ತನೆ, ಸಂಘರ್ಷ ಈ ಎಲ್ಲಾ ಮೌಲ್ಯಗಳೂ ಮೇಳೈಸಿವೆ. ಅವರು ಭಾರತ ಸಂಸ್ಕೃತಿಯ ಮೂಲ ಮೌಲ್ಯಗಳನ್ನು ಒಪ್ಪಿಕೊಂಡಿದ್ದರು, ಹಾಗಾಗಿಯೇ ಅವರು ಜಾತೀಯತೆಯನ್ನು ನಿರಾಕರಿಸದೆ ಅದರಲ್ಲಿರುವ ಕೊರತೆಗಳನ್ನು ಎತ್ತಿತೋರಿಸುವ ಪ್ರಯತ್ನಮಾಡುತ್ತಾರೆ. ಹಾಗೆಯೇ ಅದರಲ್ಲಿದ್ದ ಭಾವೈಕ್ಯತಾ ಮನೋಭಾವವನ್ನು ಅವರ ಸಾಹಿತ್ಯದಲ್ಲಿ ಗುರುತಿಸಬಹುದು.

"ಜೀವನದಲ್ಲಿ ಒಳ್ಳೆಯುದೇನಿದೆ, ವಿಚಿತ್ರವಾದದ್ದೇನಿದೆ, ಸ್ವಾರಸ್ಯವಾದದ್ದೇನಿದೆ ಅದನ್ನು ಬರೆದೆ. ಆಮೇಲೆ ಸಣ್ಣ ಕಿರುಕುಳಗಳನ್ನು ನಾನು ಯೋಚಿಸ್ತಿರಲಿಲ್ಲ ಯಾವ ತತ್ತ್ವವನ್ನು ಹಿಡಿದು ಬರೀಲಿಲ್ಲ ಜೀವನದ ಅನುಭವವನ್ನು ಹಾಗೇ ಬರೆದೆ ಲವಲವಿಕೆ, ಮಾನವೀಯತೆಯ ಉತ್ತಮ ಅಂಶಗಳನ್ನು ಕಂಡು ಬರೆದಿದ್ದೇನೆ." ಎಂಬುದಾಗಿ ಅವರೆ ಒಮ್ಮೆ ಹೇಳಿದ್ದಾರೆ.

" ಎಲ್ಲಿ?

ಗ್ರಾಮೀಣ ಪ್ರದೇಶದಲ್ಲಿರುವ ಜನರ ಜೀವನದಲ್ಲಿ ಯಾವ ರೀತಿ ಸುಧಾರಣೆಯಾಗಬೇಕು ಎಂಬ ಅರಿವನ್ನು ಗೊರೂರರು ಚೆನ್ನಾಗಿ ತಿಳಿದಿದ್ದರು. ಗ್ರಾಮ ಜೀವನದ ಬಗೆಗೆ ಅವರ ಪ್ರೀತಿ ಹೆಚ್ಚು, ಆದ್ದರಿಂದಲೇ ಅವರು ಗ್ರಾಮ ಜೀವನದ ಪರವಾಗಿಯೇ ವಕಾಲತ್ತು ವಹಿಸುತ್ತಾರೆ. ಗ್ರಾಮೀಣ ಸಂಸ್ಕೃತಿಯುಲ್ಲಿ ಭಾರತೀಯು ಸಂಸ್ಕೃತಿಯುನ್ನು ಕಾಣುತ್ತಾರೆ. ಮಾನವೀಯುತೆಯನ್ನೇ

ತಮ್ಮ ಸಾಹಿತ್ಯದ ಗುರಿಯನ್ನಾಗಿಸಿಕೊಂಡು ಬರೆಯ ಹೊರಡುತ್ತಾರೆ. ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವದಿಂದಾಗಿ ಆಧುನಿಕ ಸಮಾಜದಲ್ಲಿ ಮಾನವನ ಜೀವನ ಮೌಲ್ಯಗಳು ಯಾವ ರೀತಿಯಲ್ಲಿ ಬದಲಾವಣೆಯಾಗುತ್ತಾ ಬಂದವು ಎಂಬುದರ ಸೂಕ್ಷ್ಮ ವಿವರಗಳು ಸಹ ಇವರ ಬರಹದಲ್ಲಿ ದೊರೆಯುತ್ತವೆ. ನವೋದಯ ಸಾಹಿತ್ಯದ ಸಂದರ್ಭದ ಲೇಖಕರಲ್ಲಿ ಪ್ರಮುಖರಾಗಿ ಇಡೀ ಭಾರತೀಯ ಸಂಸ್ಕೃತಿಯನ್ನೇ ತಮ್ಮ ಸಾಹಿತ್ಯ ಕೃತಿಗಳಲ್ಲಿ ಪ್ರತಿನಿಧಿಸಿದ್ದಾರೆ. ಒಬ್ಬ ಕವಿಯನ್ನು ರೂಪಿಸುವಲ್ಲಿ ಬೇರೆ–ಬೇರೆ ಪರಿಸರಗಳು ಎಷ್ಟು ಪ್ರಮುಖವಾಗುತ್ತವೆ ಎನ್ನುವ ವಿಚಾರವು ಬಹಳ ಮುಖ್ಯ ಎಂಬುದನ್ನು ಗುರುತಿಸಬಹುದಾಗಿದೆ.

ಹೀಗೆ ಬಾಳಿನ ನಾನಾ ಮುಖಗಳ ಬಗೆಗೆ ಮೂಡಿಬಂದ ಅವರ ಸಾಹಿತ್ಯದಲ್ಲಿ ಪ್ರಬಂದಗಳನ್ನು ಪ್ರಧಾನವಾಗಿಟ್ಟುಕೊಂಡು ವಿಶ್ಲೇಷಣೆ ಮಾಡುವ ಉದ್ದೇಶವನ್ನು ಇಟ್ಟುಕೊಂಡು ಅಧ್ಯಯನಕ್ಕೆ ತೊಡಗಿದ್ದೇನೆ.

ಹೊಸಗನ್ನಡ ಸಾಹಿತ್ಯವನ್ನು ಗಮನಿಸಿದಾಗ ಗದ್ಯ ಪ್ರಕಾರವು ವಿಶೇಷವಾಗಿ ಬೆಳೆದು ಬಂದಿರುವುದನ್ನು ಗುರುತಿಸಬಹುದು. ಈ ಗದ್ಯ ಪ್ರಕಾರದಲ್ಲಿ ಪ್ರಬಂಧವು ಪ್ರಮುಖವಾಗಿ ಬೆಳವಣಿಗೆಯನ್ನು ಕಂಡಿದೆ. ಈ ಕ್ಷೇತ್ರಕ್ಕೆ ಗೊರೂರರ ಅತ್ಯುತ್ತಮ ಕಾಣಿಕೆಗಳಾದ **' ಹೇಮವತಿ ತೀರದಲ್ಲಿ ಮತ್ತು ಇತರ ಪ್ರಬಂಧಗಳು', 'ಬೆಟ್ಟದ ಮನೆಯಲ್ಲಿ ಮತ್ತು ಇತರ ಪ್ರಬಂಧಗಳು', ''ನಮ್ಮ ಊರಿನ ರಸಿಕರು', ' ಗರುಡ ಗಂಭದ ದಾಸಯ್ಯ', 'ಬೆಸ್ತರ ಕರಿಯ', 'ಹಳ್ಳಿಯ ಚಿತ್ರಗಳು'** ಇವು ಪ್ರಮುಖವಾಗಿವೆ. ಇವುಗಳನ್ನು ಪ್ರಮುಖವಾಗಿ ಇಟ್ಟುಕೊಂಡು ವಿವಿಧ ದೃಷ್ಟಿಕೋನಗಳಿಂದ ಪರಿಶೀಲಿಸಿ ಅವುಗಳ ವೈಶಿಷ್ಟಗಳನ್ನು ಗುರುತ್ತಿಸಿ ವಿಶ್ಲೇಷಣೆ ಮಾಡುವುದೇ ಈ ಅಧ್ಯಯನದ ಉದ್ದೇಶವಾಗಿದೆ.

ಈ ಮೇಲಿನ ಪ್ರಬಂಧಗಳಲ್ಲಿರುವ ಒಟ್ಟು ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ೧೦ ಅಧ್ಯಾಯಗಳಾಗಿ ವಿಭಾಗಿಸಿಕೊಂಡಿದ್ದೇನೆ. ಮೊದಲ ಅಧ್ಯಾಯದಲ್ಲಿ ಲೇಖಕರ ಬದುಕು ಬರಹಗಳನ್ನು ಕುರಿತು ಸಂಕ್ಷಿಪ್ತ ಪರಿಚಯವನ್ನು ಮಾಡಿಕೊಡಲು ಪ್ರಯತ್ನಿಸಿದ್ದೇನೆ. ಹಾಗೆಯೇ ಎರಡನೇ ಅಧ್ಯಾಯದಲ್ಲಿ ಗದ್ಯ ಸಾಹಿತ್ಯದ ಬೆಳವಣಿಗೆಗೆ ಪ್ರಬಂಧದ ಸ್ವರೂಪ ವಿನ್ಯಾಸಗಳ ಪರಿಚಯ ಮಾಡುವ ಪ್ರಯತ್ನವಿದೆ. ಮೂರನೇ ಅಧ್ಯಾಯದಲ್ಲಿ ಲಲಿತ ಪ್ರಬಂಧಗಳಲ್ಲಿ

ಕಂಡುಬರುವಂತಹ ವಸ್ತುಗಳ ವೈವಿಧ್ಯತೆಯ ಬಗೆಗೆ ಅಂದರೆ ಎಂತಹ ಸಣ್ಣ ವಿಷಯಗಳನ್ನು, ಪ್ರಾಣಿಗಳನ್ನು ಪ್ರಬಂಧದ ವಿಷಯಗಳಾಗಿ ಬಳಸಿಕೊಳ್ಳಬಹುದು. ಎಂಬ ವಿವರಗಳನ್ನು ಒಳಗೊಂಡಿದೆ. ಜೊತೆಗೆ ಪ್ರಬಂಧಗಳಲ್ಲಿ ಕತೆ ಬೆಳೆದುಬಂದಿರುವ ರೀತಿ ಅಥವಾ ಕಥಾವಿನ್ಯಾಸದ ಬಗೆಗಿನ ಚರ್ಚೆಯನ್ನು ಕಾಣಬಹುದಾಗಿದೆ. ನಾಲ್ಕನೇ ಅಧ್ಯಾಯದಲ್ಲಿ ಪ್ರಬಂಧಗಳನ್ನು ಓದಿದಾಗ ಪ್ರಮುಖವಾಗಿ ಕಂಡುಬರುವ ಪಾತ್ರಗಳ ಅಂದರೆ ಮನಸ್ಸಿನಲ್ಲಿ ಉಳಿಯುವಂತಹ ಪಾತ್ರಗಳ ಗುಣವಿಶೇಷತೆಗಳ ಬಗೆಗೆ ಅವುಗಳ ವೈವಿದ್ಯತೆಗಳ ಬಗೆಗೆ ತಿಳಿಸುವ ಪ್ರಯತ್ನವಿದೆ. ಐದನೇ ಅಧ್ಯಾಯದಲ್ಲಿ ಅಭಿವ್ಯಕ್ತಿಯ ರೀತಿ, ಬಳಕೆಯಾಗಿರುವ ಭಾಷೆಯ ವಿಶೇಷತೆ, ಶೈಲಿಗಳ ಕುರಿತು ವಿವೇಚನೆ ಇದೆ. ಆರನೇ ಅಧ್ಯಾಯದಲ್ಲಿ ಗೊರೂರರ ಹಾಸ್ಯ ಪ್ರಜ್ಞೆ ಪ್ರಬಂಧಗಳಲ್ಲಿ ಒಡಮೂಡಿರುವ ಬಗೆಯನ್ನು ಗುರುತಿಸುವ ಕಾರ್ಯವಾಗಿದೆ. ಏಳನೇ ಅಧ್ಯಾಯದಲ್ಲಿ ಜನಪದ ಸಂಸ್ಕೃತಿಯ ಪ್ರತೀಕವಾಗಿರುವ ಹಬ್ಬ ಹರಿದಿನಗಳು, ಜಾತ್ರೆ, ಬಯಲಾಟ ಮುಂತಾದವುಗಳ ವಿವರಗಳನ್ನು ಕೊಡುವ ಪ್ರಯತ್ನವಿದೆ. ಎಂಟನೇ ಅಧ್ಯಾಯದಲ್ಲಿ ಸಾಹಿತ್ಯಕ ಪ್ರಮುಖ್ಯತೆಯನ್ನು ಕುರಿತ ವಿವೇಚನೆ ಇದೆ ಒಂಭತ್ತನೇ ಅಧ್ಯಾಯದಲ್ಲಿ ಉಪಸಂಹಾರ ಹಾಗೂ ಹತ್ತನೇ ಅಧ್ಯಾಯ ನಿಬಂಧಕ್ಕೆ ಬಳಸಿಕೊಳ್ಳಲಾಗಿರುವ ಗ್ರಂಥಗಳ ವಿವರಗಳನ್ನು ತಿಳಿಸುವ ಗ್ರಂಥಋಣವಾಗಿದೆ.

ಈ ರೀತಿಯಾಗಿ ಪ್ರಬಂಧ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯು ವಿಶಾಲವಾಗಿ ಹರಡಿಕೊಂಡಿದೆ.

# ಅಧ್ಯಾಯ – ೧
## ಬದುಕು–ಬರಹ

ಗೊರೂರು ಎಂದರೆ ರಾಮಸ್ವಾಮಿ ಅಯ್ಯಂಗಾರ್ ಎನ್ನುವಂತೆ ತಮ್ಮೊಂದಿಗೆ ಊರಿನ ಹೆಸರನ್ನು ಪ್ರಸಿದ್ಧಿಗೆ ತಂದ ವ್ಯಕ್ತಿ ಗೊರೂರು ರಾಮಸ್ವಾಮಿ ಅಯ್ಯಂಗಾರರು. ಇವರು ೪–೭–೧೯೦೪ ರಲ್ಲಿ ಗೊರೂರು ಗ್ರಾಮದಲ್ಲಿ ಜನಿಸಿದರು. ತಂದೆ– ಶ್ರೀನಿವಾಸ ಅಯ್ಯಂಗಾರ್, ತಾಯಿ– ಲಕ್ಷ್ಮಮ್ಮ, ಒಟ್ಟು ಹನ್ನೆರಡು ಜನ ಮಕ್ಕಳಲ್ಲಿ ಗೊರೂರರು ಗಂಡು ಮಕ್ಕಳಲ್ಲಿ ಎರಡನೇಯವರು. ತಂದೆ ನಿಷ್ಠವಂತರಾದ ಸಂಸ್ಕೃತ ವಿದ್ವಾಂಸರಾಗಿದ್ದರು. ತುಂಬಿದ ಮನೆಯಲ್ಲಿ ಬೆಳೆದವರು " **ಹೆಣ್ಣುಗಳೇ ಹೆಚ್ಚಾಗಿದ್ದ ಮನೆಯಲ್ಲಿ ಹುಟ್ಟಿದ್ದರಿಂದ ನನ್ನ ಮೇಲೆ ಸ್ವಲ್ಪ ಪ್ರೀತಿ ಹೆಚ್ಚಾಗಿತ್ತು**". ಎಂದು ಅವರೇ ಹೇಳಿಕೊಂಡಿದ್ದಾರೆ. ಅವರ ಪ್ರಾಥಮಿಕ ಶಿಕ್ಷಣ ನಡೆದದ್ದು ಗೊರೂರಿನಲ್ಲಿಯೇ ಬಾಲ್ಯದಲ್ಲಿ ಮನೆಯಲ್ಲಿಯೇ ಅಕ್ಷರ ತಿದ್ದಿಸುವ ಕೆಲಸವು ತಂದೆಯವರ ಸಮ್ಮುಖದಲ್ಲಿಯೇ ನಡೆಯುತ್ತಿತ್ತೆಂದು ಹೇಳಿದ್ದಾರೆ. ಆಗ ಅವರ ಊರಿನಲ್ಲಿ ಇದ್ದುದು ಲೋಯರ್ ಸೆಕೆಂಡರಿಗೆ ಮಾತ್ರ ಕಟ್ಟಿಸುವ ಪಾಠಶಾಲೆಯಂತೆ. ಆ ಶಾಲೆಗೆ ಇವರನ್ನು ಸೇರಿಸಲಾಗಿತ್ತು. "ಅಷ್ಟೊಂದು ಬುದ್ಧಿವಂತನಲ್ಲದಿದ್ದರೂ ಮೇಷ್ಟರು ಹೇಳುವ ಪಾಠ ಒಂದೇ ಸಲಕ್ಕೆ ಮನಸ್ಸಿಗೆ ಹತ್ತುತ್ತಿತ್ತೆಂದೂ, ಗಣಿತವೊಂದನ್ನು ಬಿಟ್ಟು ಉಳಿದ ಎಲ್ಲ ಪಾಠಗಳಲ್ಲಿಯೂ ಹೆಚ್ಚು ನಂಬರು ತೆಗೆಯುತ್ತಿದ್ದುದಾಗಿಯೂ, ಭಾಷೆ ಎಂಬುದರಲ್ಲಿ ತಾವೇ ಮೊದಲಿಗರಾಗುತ್ತಿದ್ದುದಾಗಿಯೂ" ಹೇಳಿಕೊಂಡಿದ್ದಾರೆ. ಲೋಯರ್ ಸೆಕೆಂಡರಿ ಪರೀಕ್ಷೆಗೆ ನಡೆಸಿದ ಸೆಲೆಕ್ಷನ್ ಪರೀಕ್ಷೆಯಲ್ಲಿ ಗಣಿತದಲ್ಲಿ ಕಡಿಮೆ ಅಂಕಗಳು ಬಂದರು ಕೊನೆಯ ಪರೀಕ್ಷೆಯಲ್ಲಿಉತ್ತೀರ್ಣರಾದುದ್ದಾಗಿಯೂ ಮುಂದಿನ ಎರಡು ವರ್ಷಗಳಲ್ಲಿ ಡಬ್ಬಲ್ ಪ್ರಮೋಷನ್ ಪಡೆದು ಇಂಗ್ಲೀಷ್ ಲೋಯರ್ ಸೆಕಂಡರಿ ಪರೀಕ್ಷೆಯಲ್ಲಿಯೂ ಪಾಸಾದರು.

ಈ ವೇಳೆಗಾಗಲೇ ಇವರಲ್ಲಿ ಸಾಹಿತ್ಯದ ಅಭಿರುಚಿಯೂ ಬೆಳೆಯುತ್ತಿತ್ತು. ದೇಶಿಕಾಚಾರ್ ಎಂಬ ಶಾನುಭೋಗರ ಮನೆಯಲ್ಲಿ ದೊರೆತ ಗಳನನಾಥರ ಕಾದಂಬರಿ, ವೆಂಕಾಟಾಚಾರ್ಯರ ಕಾದಂಬರಿಗಳನ್ನು ಓದಿದ್ದರು. ಅಲ್ಲದೆ ತಾವೇ ಕೆಲವು ಪುಸ್ತಕಗಳನ್ನು ಅಂಚೆಯ ಮೂಲಕ ತರಿಸಿಕೊಂಡಿದ್ದರಂತೆ.

ಪ್ರೌಢ ಶಾಲೆಗೆ ಸೇರಿದ ಮೊದಲ ದಿನವೇ ನಡೆಸಿದ ಪ್ರಬಂಧ ಲೇಖನದಲ್ಲಿ ಮೊದಲ ಸ್ಥಾನವನ್ನು ಗಳಿಸಿದ್ದಲ್ಲದೆ, ಇದು ಮಾದರಿ ಪ್ರಬಂಧವೆನಿಸಿಕೊಂಡಿತ್ತಂತೆ. ಈ ಅವಧಿಯಲ್ಲಿಯೇ ಅವರು ಗಾಂಧಿಜೀಯವರ ಹೆಸರನ್ನು ಕೇಳಿದರು. ಮುಂದೆ ಸ್ವತಂತ್ರ್ಯ ಚಳುವಳಿಯಲ್ಲಿ ಧುಮುಕಿದರು. ಅನಂತರದಲ್ಲಿ ಅಹಮದಾಬಾದಿಗೆ ಹೋಗಿ ಗಾಂಧೀಜಿಯ ಆಶ್ರಮದಲ್ಲಿದ್ದುಕೊಂಡು ಗುಜರಾತ್ ವಿದ್ಯಾಪೀಠದಲ್ಲಿ ವ್ಯಾಸಂಗ ಮುಂದುವರಿಸಿದರು. ಬಳಿಕ ಮದರಾಸಿನ ಲೋಕಮಿತ್ರ ಎಂಬ ಕನ್ನಡ ಪತ್ರಿಕೆಯ ಉಪಸಂಪಾದಕರಾಗಿ ಆಂಧ್ರಪತ್ರಿಕೆ ಮತ್ತು ಭಾರತಿ ಪತ್ರಿಕೆಗಳ ಕನ್ನಡ ಸಮಾಚಾರ ಲೇಖಕರಾಗಿ ಕೆಲಸಮಾಡಿದರು. ಮೈಸೂರಿನ ವೆಂಕಟಕೃಷ್ಣಯ್ಯನವರು ಹೊರತರುತ್ತಿದ್ದ ಸಾಧ್ವಿ ಪತ್ರಿಕೆಗೆ ಒಂದು ಸಣ್ಣ ಲೇಖನವನ್ನು ಬರೆದರು. ಅದೇ ಅವರ ಮೊದಲನೆಯ ಬರಹವಾಗಿದೆ. ಅನಂತರದಲ್ಲಿ ಬೆಂಗಳೂರಿನ ಕೆಂಗೇರಿಯ ಗುರುಕುಲಾಶ್ರಮದಲ್ಲಿ ಸೇವೆಗೆ ಸೇರಿದರು. ಅದು ರಾಷ್ಟ್ರೀಯ ಧ್ಯೇಯೊದ್ದೇಶದ ಶಿಕ್ಷಣ ಸಂಸ್ಥೆಯಾಗಿದ್ದು ಹರಿಜನೋದ್ಧಾರ ಅದರ ಪ್ರಮುಖ ವೈಶಿಷ್ಟವಾಗಿತ್ತು. ಮುಂದೆ ಬೆಂಗಳೂರಿನ ಅಖಿಲ ಭಾರತ ಚರಕ ಸಂಘದ ಖಾದಿ ವಸ್ತ್ರಾಲಯದ ಸಂಚಾಲಕರಾಗಿ ಜವಬ್ಧಾರಿ ವಹಿಸಿಕೊಂಡರು. ಕೆಲವು ವರ್ಷಗಳ ಬಳಿಕ ೧೯೩೩ರಲ್ಲಿ ತಮ್ಮ ಊರಾದ ಗೊರೂರಿಗೆ ಹಿಂತಿರುಗಿ ಮೈಸೂರು ಗ್ರಾಮ ಸೇವಾ ಸಂಘವನ್ನು ಸ್ಥಾಪಿಸಿ ಅದರ ಮೂಲಕ ಗಾಂಧೀಜಿಯವರ ರಚನಾತ್ಮಕ ಕಾರ್ಯ ಚಟುವಟಿಕೆಗಳಾದ, ಖಾದಿ ಪ್ರಚಾರ, ಹರಿಜನೋದ್ಧಾರ, ವಯಸ್ಕರ ಶಿಕ್ಷಣ, ಗ್ರಾಮ ಕೈಗಾರಿಕೆಗಳು ಮುಂತಾದವುಗಳನ್ನು ನಡೆಸತೊಡಗಿದರು. ಬಳಿಕ ೧೯೪೨ರ ಚಲೇಜಾವ್ ಅಥವಾ 'ಭಾರತ ಬಿಟ್ಟು ತೊಲಗಿ' ಚಳುವಳಿಯಲ್ಲಿ ಭಾಗವಹಿಸಿದರು. ಸೆರೆಮನೆವಾಸವನ್ನು ಅನುಭವಿಸಿದರು. ಸ್ವಾತಂತ್ರ್ಯ ಬಂದ ಬಳಿಕ ಮೈಸೂರಿನಲ್ಲಿ ಪ್ರಜಾ ಸರ್ಕಾರ ಸ್ಥಾಪನೆಗಾಗಿ ನಡೆದ ಚಳುವಳಿಯಲ್ಲಿಯೂ ಭಾಗವಹಿಸಿದರು. ಎರಡು ಬಾರಿ ವಿಧಾನ ಪರಿಷತ್ತಿನ ಸದಸ್ಯರಾಗಿ ಸುಮಾರು ಹನ್ನೆರಡು ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಕಾರ್ನಾಟಕದ ಏಕೀಕರಣಕ್ಕಾಗಿ ದುಡಿದರು.

ಗೊರೂರರು ತಮ್ಮ ಕೊನೆಯ ದಿನಗಳಲ್ಲಿ ಅನಾರೋಗ್ಯಕ್ಕೆ ತುತ್ತಾಗಿ ೧೯೯೧ರಲ್ಲಿ ಸೆಪ್ಟೆಂಬರ್ ೨೮ ರಂದು ಕೊನೆಯುಳಿಸಿರೆಳೆದರು. ಗೊರೂರರು ಸಾಹಿತಿಯಷ್ಟೆ ಅಲ್ಲದೆ ಗಾಂಧಿವಾದಿ ಹಾಗೂ ಸ್ವತಂತ್ರ ಹೋರಾಟಗಾರರೂ ಆಗಿ, ಗಾಂಧೀಜಿಯವರ ಜೀವನ ತತ್ತ್ವಗಳನ್ನು ತಮ್ಮ ಬದುಕಿಗೆ ಅಳವಡಿಸಿಕೊಂಡಿದ್ದರು.

# ಬರಹ

ಗೊರುರರ ಸಾಹಿತ್ಯ ಕೃಷಿ ಪ್ರಾರಂಭವಾದುದು ಪತ್ರಿಕಾ ಲೇಖನಗಳ ಮೂಲಕ. ಅವರ ಮೊದಲ ಲೇಖನ ಪ್ರಕಟವಾದುದ್ದು ಸಾಧ್ವಿ ಪತ್ರಿಕೆಯ ಮೂಲಕ ಲೇಖನದ ವಿಷಯ "ಖಾದಿ, **ವಸ್ತ್ರೋದ್ಯಮ ಹೇಗೆ ನಾಡಿನ ನಿರುದ್ಯೋಗಕ್ಕೆ ಪರಿಹಾರವನ್ನು ಒದಗಿಸಬಲ್ಲದು".** ಎಂಬುವುದಾಗಿತ್ತು. ಅನಂತರದಲ್ಲಿ ಜಯಕರ್ನಾಟಕ ಮಾಸ ಪತ್ರಿಕೆಗೆ ' **ಭಾರತ ಒಂದು ಜನಾಂಗವೆ?', 'ಭಾರತದ ಆರ್ಥಿಕ ಅವನತಿಗೆ ಕಾರಣ'** ಮುಂತಾದ ಲೇಖನಗಳನ್ನು ಬರೆದಿದ್ದಾರೆ.

ಗೊರೂರರ ಒಟ್ಟು ಸಾಹಿತ್ಯ ಕೃಷಿಯನ್ನು ಕಥೆ, ಕಾದಂಬರಿ, ಪ್ರಬಂಧ, ಸಂಗ್ರಹ, ಅನುವಾದ ಕೃತಿಗಳು ಎಂಬುದಾಗಿ ವಿಭಾಗಿಸಿಕೊಳ್ಳಬಹುದಾಗಿದೆ. ಗ್ರಂಥರೂಪದಲ್ಲಿ ಪ್ರಕಟವಾಗಿರುವ ಇವರ ಕೃತಿಗಳ ಸಂಖ್ಯೆ ೩೪ ಇವರ ಕಥಾ ಸಂಕಲನಗಳು, ಪ್ರಬಂಧಗಳು, ವಿನೋದ ಚಿತ್ರಗಳು ಇವುಗಳನ್ನು ವಿಭಾಗಿಸಿ ತೋರಿಸುವುದು ಕಷ್ಟದ ಕೆಲಸವಾಗಿದೆ. ಈ ೩೪ ಕೃತಿಗಳಲ್ಲಿ ೨೯ ಸ್ವತಂತ್ರ ಕೃತಿಗಳಾಗಿವೆ. ಕಥೆ, ಪ್ರಬಂಧ, ವಿನೋದ ಚಿತ್ರಗಳು ಒಟ್ಟು ೧೪, ಊರ್ವಶಿ, ಪುನರ್ಜನ್ಮ (ವತ್ಸಲೆ), ಮೆರವಣಿಗೆ, ಹೇಮವತಿ ಕಾದಂಬರಿಗಳು, ಜನಪದ ಜೀವನ ಮತ್ತು ದರ್ಶನ, ಹಳ್ಳಿಯ ಬಾಳು, ಹಳ್ಳಿಯ ಹಾಡುಗಳು– ಇವು ಜಾನಪದ ಕೃತಿಗಳು, ಜಗತ್ತಿನ ಮಹದ್ವ್ಯಕ್ತಿಗಳು, ಭಾರತ ಭಾಗ್ಯವಿಧಾತ (ಲೇಖನಗಳು) ಮೌಲಾನಾ ಅಬ್ದುಲ್ ಕಲಾಂ ಆಜಾದ್, ಸತಿ ಕಸ್ತೂರಿ ಬಾ–, ಜೀವನ ಚಿತ್ರಗಳು, ಅಮೇರಿಕಾದಲ್ಲಿ ಗೊರೂರು, ಮಹಾತ್ಮಗಾಂಧಿಯವರ ದಕ್ಷಿಣಯಾತ್ರೆ,– ಪ್ರವಾಸ ಕಥನಗಳು. ಕುಮಾರವ್ಯಾಸ ಭಾರತದ ಸ್ತ್ರೀಪಾತ್ರಗಳು, ರಸಫಲ ಸಾಹಿತ್ಯ ರಶ್ಮಿ– ವಿಮರ್ಶಾ ಕೃತಿಗಳು, ಮಹಾತ್ಮ ಗಾಂಧಿಯವರ ಹಾಸ್ಯ ಪ್ರವೃತ್ತಿ ಮತ್ತು ಇತರ ಲೇಖನಗಳು, ಹಳೆಯ ಪಳಕೆಯ ಮುಖಗಳು ಹೊಸಗನ್ನಡ ಪ್ರಬಂಧ ಸಂಕಲನ–ಸಂಕೀರ್ಣ. ಕೊನೆಷ್ಟೆಟ ಕತೆಗಳು ಪಾಶ್ಚಾತ್ಯರ ಪುರಾತನ ಕಥೆಗಳು–ಅನುವಾದ ಕಥೆಗಳು. ಕ್ರೌಂಚವಧ. ಭಗವಾನ್ ಕೌಟಿಲ್ಯ, ಮಲೆನಾಡವರು, ರಾಜನರ್ತಕಿ– ಅನುವಾದ ಕಾದಂಬರಿಗಳು ಮುಂತಾದವು ಇವರ ಕೃತಿಗಳು. ಭಾರತದ ಸ್ವಾತಂತ್ರ್ಯ, ಸಾಹಿತ್ಯಾನುಭವ ಮತ್ತು ಸರ್ವಜ್ಞನು ತೋರಿದ ದಾರಿ ಎಂಬವು ಮೂರು ಅಲಭ್ಯ ಕೃತಿಗಳು.

" ಗದ್ಯ ಸಾಹಿತ್ಯದಲ್ಲಿ ತೀರ ಗಂಭೀರ ಸಾಹಿತಿಯಾಗದಿದ್ದರೂ ಕೇವಲ ಲಘು ಸಾಹಿತಿಯೂ ಆಗದೆ ಎರಡರ ಸಮನ್ವಯದಲ್ಲಿ ಸಾಹಿತ್ಯ ಸೃಷ್ಟಿ ಮಾಡಿದ ಗೊರೂರರು ಸು.೧೪೨ ಕಥೆಗಳನ್ನು ಬರೆದಿದ್ದಾರೆ ಪ್ರಾಯಶಃ ಮಾಸ್ತಿಯವರನ್ನು ಬಿಟ್ಟರೆ ಇಷ್ಟೊಂದು ಕಥೆ ಬರೆದವರು ಗೊರೂರರೆ"* ಎಂಬುದಾಗಿ ಡಾ. ಸಿ. ಜಿ. ವೆಂಕಟಯ್ಯನವರು ಹೇಳಿದ್ದಾರೆ.

ಗೊರೂರರ ಸಾಹಿತ್ಯವನ್ನು ಒಟ್ಟಾಗಿ ಗಾಂಧಿ ಚಿಂತನೆಯ ಪುನರ್ ಸೃಷ್ಟಿ ಎಂಬುದಾಗಿ ಕೆಲವರು ಗುರುತಿಸುತ್ತಾರೆ. ಗಾಂಧೀಜಿಯವರ ಚಿಂತನೆಗಳಾದ ಸ್ವದೇಶಿಯತೆ, ಗ್ರಾಮ ಸ್ವರಾಜ್ಯ, ಗ್ರಾಮ ಪುನರುಜ್ಜೀವನ ಇವುಗಳ ಪ್ರಭಾವವನ್ನು ಗುರುತಿಸಬಹುದಾಗಿದೆ. ಗೊರೂರರು ಗಾಂಧೀಜಿಯವರ ಒಡನಾಟದಲ್ಲಿ ಇದ್ದುದರಿಂದ ಅವರ ಜೀವನದ ರೀತಿ, ಬರವಣಿಗೆಗಳು ಇವರ ಬರವಣಿಗೆಯ ಮೇಲೆ ಪ್ರಭಾವ ಬೀರಿದೆ ಎಂಬುದಾಗಿ ಹೇಳಬಹುದು.

" ಗೊರೂರರ ಗಾಂಧಿ ಸಾಹಿತ್ಯ ಎರಡು ಮುಖದ್ದಾಗಿದೆ ಗಾಂಧೀಜಿಯವರ ಬರವಣಿಗೆಯನ್ನು ಕನ್ನಡಕ್ಕೆ ಅನುವಾದಿಸಿದ್ದು ಮತ್ತು ಗಾಂಧಿ ಚಿಂತನೆಯ ಪೂರಕ, ಪ್ರೇರಕ ಸಾಹಿತ್ಯದ ಮೂಲ ಕೃತಿಗಳು ಮತ್ತು ವ್ಯಕ್ತಿಗಳ ಬಗ್ಗೆ ಪರಿಚಯ ಮಾಡಿಕೊಡುವುದು ಒಂದು ಮುಖವಾದರೆ ತಮ್ಮ ಕೃತಿಗಳಲ್ಲಿ ಗಾಂಧೀಜಿ ಆವಿರ್ಭವಿಸುವಂತೆ ಮಾಡಿದ್ದು ಎರಡನೆಯ ಮುಖ" ಒಟ್ಟಿನಲ್ಲಿ ಗೊರೂರರ ಸಾಹಿತ್ಯ ಗ್ರಾಮ್ಯ ಪ್ರಾಧಾನ್ಯತೆಯನ್ನು ಹೊಂದಿರುವ, ವೈವಿಧ್ಯ ವಿಷಯಗಳನ್ನೊಳಗೊಂಡ ಸಾಹಿತ್ಯವಾಗಿದೆ.

*. ಡಾ. ಗೊರೂರು. ಜೀವನ–ಸಾಧನೆ ಪು.ಸ.೯

# ಅಧ್ಯಾಯ -೨
# ಗದ್ಯ ಸಾಹಿತ್ಯದ ಬೆಳವಣಿಗೆ
# ಪ್ರಬಂಧದ ಸ್ವರೂಪ ವಿನ್ಯಾಸ

ಕನ್ನಡದಲ್ಲಿ ಗದ್ಯ ಸಾಹಿತ್ಯದ ಆರಂಭವನ್ನು ಹಲ್ಮಿಡಿ ಶಾಸನದ ಕಾಲದಿಂದಲೇ ಗುರುತಿಸಬಹುದಾಗಿದೆ. ಸು. ೫ನೇ. ಶತಮಾನದಿಂದಲೂ ಗದ್ಯ ಶಾಸನಗಳು ಸಾಕಷ್ಟು ದೊರೆತಿವೆ. ವೀರಗಲ್ಲು, ಮಾಸ್ತಿಕಲ್ಲು, ದತ್ತಿ ಶಾಸನಗಳು ಆ ಕಾಲದ ಸಾಮಾಜಿಕ, ಐತಿಹಾಸಿಕ, ವಿವರಗಳನ್ನು ನೀಡುವುದರ ಜೊತೆಗೆ ಭಾಷೆ ಬೆಳೆದು ಬಂದ ಬಗೆಯನ್ನೂ ತಿಳಿಸುತ್ತವೆ.

ಕ್ರಿ. ಶ. ಸು. ೮೦೦ ರಲ್ಲಿ ರಚಿಸಲಾಗಿರುವ ಮಾವಳ್ಳಿ ಶಾಸನವು ಖಚಿತವಾದ ಸಾಹಿತ್ಯಕ ಗುಣಗಳನ್ನು ಹೊಂದಿದೆ. ಈ ಕಾರಣದಿಂದಾಗಿ ಇದು ಹೆಚ್ಚಿನ ಮಹತ್ವವನ್ನು ಪಡೆದುಕೊಂಡಿದೆ. ಹಲ್ಮಿಡಿ ಶಾಸನಕ್ಕೂ ಈ ಶಾಸನಕ್ಕೂ ನಡುವೆ ಸು. ಮೂರುವರೆ ಶತಮಾನಗಳ ಅಂತರವಿದೆ. ಈ ಅವಧಿಯಲ್ಲಿ ಭಾಷೆಯಲ್ಲಿ ಉಂಟಾಗಿದ್ದ ಬೆಳವಣಿಗೆಗೆ ಈ ಶಾಸನ ಸಾಕ್ಷಿಯಾಗಿ ನಿಲ್ಲುತ್ತದೆ.

ಹೀಗೆ ಶಾಸನಗಳಿಂದ ಆರಂಭವಾದ ಗದ್ಯ ಸಾಹಿತ್ಯವು ಕನ್ನಡದ ಗದ್ಯ ಸಾಹಿತ್ಯಕ್ಕೆ ಒಂದು ಉತ್ತಮ ಕೊಡುಗೆಯನ್ನು ನೀಡಿದೆ. ಶಾಸನಗಳ ನಂತರದ ಮತ್ತೊಂದು ಮಹತ್ತರವಾದ ಬೆಳವಣಿಗೆ ಎಂದರೆ ಶಿವಕೋಟ್ಯಾಚಾರ್ಯರು ರಚಿಸಿರುವ ವಡ್ಡಾರಾಧನೆಯ ಗದ್ಯ, ಮಾರ್ಗ ಮತ್ತು ದೇಸಿಗಳನ್ನು ಅಳವಡಿಸಿಕೊಂಡು ರಚನೆಯಾದ ಕೃತಿ. ಹತ್ತೊಂಭತ್ತು ಕಥೆಗಳನ್ನು ಒಳಗೊಂಡ ಗದ್ಯ ಕಥಾಕೋಶ. ಕನ್ನಡದ ಮೊತ್ತಮೊದಲ ಕೃತಿ. ಚಾವುಂಡರಾಯನಿಂದ ರಚಿತವಾದ ತ್ರಿಷಷ್ಠಿ ಲಕ್ಷಣ ಮಹಾಪುರಾಣ ಕನ್ನಡದ ಎರಡನೇ ಗದ್ಯ ಕೃತಿ, ಅರವತ್ತಮೂರು ಜನ ಪುರಾತನರ ಚರಿತ್ರೆಯನ್ನು ಹೇಳುತ್ತದೆ. ಈ ಕೃತಿಯು ಹಳಗನ್ನಡದಲ್ಲಿ ರಚನೆಯಾಗಿದ್ದು ಇದರ ಗದ್ಯ ಶೈಲಿಯು ವಿಶಿಷ್ಟವಾದುದೆನಿಸಿಕೊಂಡಿದೆ.

೧೧ನೇ ಶತಮಾನದಲ್ಲಿ ಗದ್ಯಪ್ರಕಾರಕ್ಕೆ ದೊರೆತ ಪ್ರಮುಖ ಕೊಡುಗೆ ಎಂದರೆ ಗದ್ಯ ಮತ್ತು ಪದ್ಯ ಗಳು ಮಿಶ್ರಿತವಾದ ಚಂಪೂ ಕೃತಿಗಳಲ್ಲಿ ಕಂಡುಬಂದ ಗದ್ಯ, ಪಂಪ ತನ್ನ ಎರಡು ಕೃತಿಗಳಲ್ಲಿಯೂ ಗದ್ಯವನ್ನು ಬಹಳ ಔಚಿತ್ಯಪೂರ್ಣವಾಗಿ ಬಳಸಿಕೊಂಡಿದ್ದಾನೆ. ದುರ್ಗಸಿಂಹನ ಪಂಚತಂತ್ರ, ನಯಸೇನನ ಧರ್ಮಾಮೃತಗಳಲ್ಲಿಯೂ ಗದ್ಯವೇ ಪ್ರಧಾನ ಸ್ಥಾನ ಪಡೆದುಕೊಂಡಿದೆ.

ಹೀಗೆ ಹಳಗನ್ನಡದ ಹಲವಾರು ಕವಿಗಳು ತಮ್ಮ ಕೃತಿಗಳಲ್ಲಿ ಅಗತ್ಯಕ್ಕನುಗುಣವಾಗಿ ಗದ್ಯವನ್ನು ಬಳಸಿಕೊಂಡಿದ್ದಾರೆ.

೧೨ನೇ ಶತಮಾನದಲ್ಲಿ ಬಂದ ವಚನ ಸಾಹಿತ್ಯವು ಕನ್ನಡ ಗದ್ಯ ಸಾಹಿತ್ಯಕ್ಕೆ ಒಂದು ವಿಶಿಷ್ಟವಾದ ತಿರುವನ್ನು ನೀಡಿತೆನ್ನಬಹುದು. ಜನಸಾಮಾನ್ಯರ ಸರಳ ಭಾಷೆಯನ್ನು, ವಿವಿಧ ಕಸುಬುಗಳಿಗೆ ಸೇರಿದ ಕಸುಬುದಾರರು ತಮ್ಮ ಕಸುಬಿನ ಪರಿಭಾಷೆಯನ್ನೇ ಬಳಸುವುದರ ಮೂಲಕ ಭಾಷೆಗೆ ಒಂದು ಹೊಸ ಚೈತನ್ಯ ವನ್ನು ನೀಡಿದರು. ಹಾಗೆಯೇ ಹರಿಹರನ ರಗಳೆಯಲ್ಲಿನ ಗದ್ಯವು ಕನ್ನಡ ಗದ್ಯ ಸಾಹಿತ್ಯಕ್ಕೆ ಮತ್ತೊಂದು ಪ್ರಮುಖವಾದ ಕೊಡುಗೆ ಎಂದು ಹೇಳಬಹುದು. ರಗಳೆಯು ವಚನಗಳ ಧೋರಣೆಯನ್ನು ತನ್ನಲ್ಲಿ ಅಳವಡಿಸಿಕೊಂಡು ಕನ್ನಡ ಗದ್ಯದ ಜೀವಂತಿಕೆಗೆ ಕಾರಣವಾಗಿದೆ. ಹನ್ನೆರಡನೇ ಶತಮಾನದಲ್ಲಿ ಮೈಸೂರು ಒಡೆಯರ ಆಳ್ವಿಕೆಯಲ್ಲಿ ಅದರಲ್ಲಿಯೂ ಚಿಕ್ಕದೇವರಾಜರ ಕಾಲದಲ್ಲಿ ಗದ್ಯವು ವಿಶೇಷವಾಗಿ ಬೆಳೆಯಿತು. ಚಿಕ್ಕದೇವರಾಜ ಒಡೆಯರ-ಚಿಕ್ಕದೇವರಾಜ ಬಿನ್ನಪ, ತಿರುಮಲಾರ್ಯನ ಚಿಕ್ಕದೇವರಾಜ ವಂಶಾವಳಿ ಕನ್ನಡ ಗದ್ಯ ಸಾಹಿತ್ಯದ ಉತ್ತಮ ಮಾದರಿಗಳಾಗಿವೆ.

೧೯ನೇ ಶತಮಾನದಲ್ಲಿ ಗದ್ಯ ಪ್ರಕಾರವು ಹೊಸ ಚಿಂತನೆಗಳ ಮೂಲಕ ಜನಪ್ರಿಯತೆಯನ್ನು ಗಳಿಸಿತು. ದೇವಚಂದ್ರನ ' ರಾಜಾವಳಿ ಕಥೆ' ಮುಮ್ಮಡಿ ಕೃಷ್ಣರಾಜರ ಕೃತಿ, ಕೆಂಪುನಾರಾಯಣನ 'ಮುದ್ರಾಮಂಜೂಷ', ಮುದ್ದಣನ ' ಅದ್ಬುತ ರಾಮಾಯಣ', 'ರಾಮಾಶ್ವಮೇದ', ಮುಂತಾದ ಗದ್ಯಕೃತಿಗಳಿಂದಾಗಿ ಈ ಯುಗವು ಗದ್ಯಸಾಹಿತ್ಯದ ಸುವರ್ಣಯುಗವೆನಿಸಿತು. ಹೀಗೆ ಮುಂದುವರಿದ ಗದ್ಯವು ಸತ್ವಶಾಲಿಯಾಗಿ ಬೆಳೆದು ೨೦ನೇ ಶತಮಾನದ ಹೊತ್ತಿಗೆ ಶ್ರೇಷ್ಠ ಸ್ಥಾನವನ್ನು ಪಡೆದುಕೊಂಡಿತು. ವಿದೇಶಿ ಭಾಷಾ ಸಾಹಿತ್ಯಗಳ ಪ್ರಭಾವದಿಂದಾಗಿ ಕನ್ನಡ ಗದ್ಯ ಹೊಸ ಬಗೆಯ ಸಾಧ್ಯತೆಗಳನ್ನು ಅಳವಡಿಸಿಕೊಂಡು ಯಶಸ್ಸು ಪಡೆಯಿತು.

ಪಾಶ್ಚಾತ್ಯ ಸಾಹಿತ್ಯದ ಪ್ರೇರಣೆಯಿಂದ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕಂಡುಬಂದ ಒಂದು ವಿಶಿಷ್ಟ ಪ್ರಕಾರವೆಂದರೆ ಗದ್ಯಸಾಹಿತ್ಯ, ಕಾದಂಬರಿ, ಸಣ್ಣಕತೆ, ಜೀವನ ಚರಿತ್ರೆ, ನಾಟಕ, ಪ್ರಬಂಧ, ಹರಟೆ, ಪ್ರವಾಸಸಾಹಿತ್ಯ, ಪತ್ರ ಸಾಹಿತ್ಯ, ವೈಜ್ಞಾನಿಕ ಸಾಹಿತ್ಯ, ಮಕ್ಕಳ ಸಾಹಿತ್ಯ, ವಿಮರ್ಶೆ, ಹಾಸ್ಯ ಇತ್ಯಾದಿ.

ಹೊಸಗನ್ನಡ ಗದ್ಯ ಸಾಹಿತ್ಯಕ್ಕೆ ಕೆಂಪುನಾರಾಯಣ ತನ್ನ ಮುದ್ರಾಮಂಜೂಷದಿಂದ ನಾಂದಿ ಹಾಡಿದನೆಂದು ಹೇಳಲಾಗಿದೆ. ಹಾಗೆಯೇ ಮುದ್ದಣನು ತನ್ನ ' ಅದ್ಭುತ ರಾಮಾಯಣ', ರಾಮಶ್ವಮೇದ ಎಂಬ ಕೃತಿಗಳನ್ನು ಹಳಗನ್ನಡ ನಡುಗನ್ನಡ ಬೆರೆತ ಗದ್ಯದಲ್ಲಿ ಬರೆದಿದ್ದಾರೆ.

ಕನ್ನಡದಲ್ಲಿ ಪ್ರಬಂಧ, ಹರಟೆ, ಹಾಸ್ಯ ಪ್ರಬಂಧ, ವ್ಯಕ್ತಿ ಚಿತ್ರ ಮುಂತಾದವು ವೈಶಿಷ್ಟ್ಯಪೂರ್ಣವಾಗಿ ಪ್ರತ್ಯೇಕ ಸಾಹಿತ್ಯ ಪ್ರಕಾರವೆಂದು ಗುರುತಿಸಿಕೊಳ್ಳುವಂತೆ ಬೆಳೆದಿವೆ. ಪ್ರಬಂಧವು ಹತ್ತೊಂಭತ್ತನೆ ಶತಮಾನದ ಕೊನೆ ಮತ್ತು ಇಪ್ಪತ್ತನೆ ಶತಮಾನದ ಆರಂಭಕಾಲದಲ್ಲಿ ಕಾಣಿಸಿಕೊಂಡು ೧೯೩೦ ರಿಂದೀಚೆಗೆ ಸ್ಥಾಯಿಯಾಗಿ ನೆಲೆಯೂರಿದೆ. ವಿ. ಸೀತಾರಾಮಯ್ಯ, ತೀ. ನಂ. ಶ್ರೀಕಂಠಯ್ಯ, ಕುವೆಂಪು, ಎ.ಎನ್. ಮೂರ್ತಿರಾವ್, ಶಿವರಾಮಕಾರಂತ, ದ.ಬಾ. ಕುಲಕರ್ಣಿ, ನಾ. ಕಸ್ತೂರಿ, ಕೆ.ಎಸ್. ನರಸಿಂಹ ಸ್ವಾಮಿ, ರಾವ್ ಬಹುದ್ದೂರ್, ಗೊರೂರು ರಾಮಸ್ವಾಮಿ ಅಯ್ಯಂಗಾರ್ ಮುಂತಾದವರ ಬರಹದಿಂದ ಪ್ರಬಂಧ ಸಾಹಿತ್ಯವು ಶ್ರೀಮಂತಗೊಂಡಿದೆ.

" ಲಘು ಪ್ರಬಂಧ ಮತ್ತು ಹರಟೆಯ ಕ್ಷೇತ್ರದಲ್ಲಿ ಕನ್ನಡ ಗದ್ಯದ ಸಾಧನೆಯನ್ನು ಪ್ರಮುಖವಾಗಿ ಹೀಗೆ ಗುರುತಿಸಬಹುದಾಗಿದೆ. ವಸ್ತುವಿಗಿಂತ ಶೈಲಿ ಇಲ್ಲಿ ಪ್ರಾಮುಖ್ಯ ಪಡೆಯುತ್ತದೆ. ಬರಹಗಾರನ ಅನುಭವ, ಸುಸಂಸ್ಕೃತ ಚಿಂತನೆ, ಅಭಿರುಚಿ ಇವೆಲ್ಲವೂ ಕಾರ್ಯ ಪ್ರವೃತ್ತವಾಗಿದ್ದುಕೊಂಡು ಅಭಿವ್ಯಕ್ತಿಯ ವೈಶಿಷ್ಟ್ಯದಿಂದ ಜೀವತುಂಬಿಕೊಂಡು ಹರಿಯುವ ಬೆಳವಣಿಗೆಯೇ ಈ ಪ್ರಕಾರ. ನಿರ್ದಿಷ್ಟ ಕ್ಷೇತ್ರವೊಂದನ್ನು ಇರಿಸಿಕೊಳ್ಳದೆ ಆಲೋಚನಾ ಲಹರಿಯನ್ನು ಹರಿಯ ಬಿಡತ್ತ ಹಾಸ್ಯಭರಿತವಾಗಿ ಸರಾಗವಾಗಿ ಸಾಗುವ ಹರಟೆಯೊಂದು ಮನರಂಜನೆಗೆ ಆಹಾರವಾಗುತ್ತದೆ. ಒಂದು ವಿಷಯವನ್ನು ಕೇಂದ್ರವಾಗಿ ಹೊಂದಿದ್ದು ಅದರ ಸುತ್ತ ನಮ್ಮ ಆಲೋಚನೆಗಳನ್ನು ಹರಿಯಬಿಡುತ್ತಾ ಸಾಗುವ ಲಲಿತ ಪ್ರಬಂಧ ನಾನಾ ಬಗೆಯ ಲೇಖಕರನ್ನು ಆಕರ್ಷಿಸಿದೆ."* ಕುವೆಂಪು, ರಾವ್‌ಬಹದ್ದೂರ್, ಗೊರೂರು ರಾಮಸ್ವಾಮಿ ಅಯ್ಯಂಗಾರ್, ತೀ. ನಂ. ಶ್ರೀ, ರಾ. ಕುಲಕರ್ಣಿ, ವಿ. ಸೀತಾರಾಮಯ್ಯ, ಪು. ತಿ. ನರಸಿಂಹಚಾರ್, ಎ.ಎನ್. ಮೂರ್ತಿರಾಯರು, ಮಾಸ್ತಿ ಮುಂತಾದವರು ಈ ಕ್ಷೇತ್ರಕ್ಕೆ ತಮ್ಮ ಕೊಡುಗೆಯನ್ನು ನೀಡಿದ್ದಾರೆ. ಕನ್ನಡದ ಪ್ರಬಂಧಕಾರರು ವೈವಿಧ್ಯಮಯವಾದ ವಿಚಾರಗಳನ್ನು ಪ್ರಬಂಧ ರಚನೆಯ ವಿಷಯಗಳಾಗಿ ಬಳಸಿಕೊಂಡಿದ್ದಾರೆ.

---

* ಕನ್ನಡ ಸಾಹಿತ್ಯ ಚರಿತ್ರೆ- ತ.ಸು. ಶಾಮರಾಯ ಪು. ಸ. ೨೪೯

ಗೊರೂರರ ಕಥೆಗಳು. ವಿನೋದ ಚಿತ್ರಗಳು. ಪ್ರಬಂಧಗಳನ್ನು ಗೆರೆ ಎಳೆದು ತೋರಿಸುವಂತದ್ದು ಬಹಳ ಕಷ್ಟದ ಕೆಲಸವಾಗಿದೆ. ಗೊರೂರರ ಕಥೆ ಮತ್ತು ಕಾದಂಬರಿಗಳಿಗೆ ಹೇಗೆ ಹಳ್ಳಿ ಸ್ಫೂರ್ತಿಯ ಸೆಲೆಯಾಗಿತ್ತೋ ಹಾಗೆಯೇ ಅವರ ಪ್ರಬಂಧಗಳಿಗೂ ಹಳ್ಳಿಯೇ ಸ್ಫೂರ್ತಿಯ ತಾಣವಾಗಿದೆ. ಅವರ ಪ್ರಬಂಧಗಳು ಇತರರಿಂದ ಕೇಳಿ ಕಂಡಂತಹ ಅನುಭವಗಳಿಗಿಂತ ಮಿಗಿಲಾಗಿ ತಾವೇ ಸ್ವತಃ ಅನುಭವಿಸಿದ ಅನುಭವಗಳ ನಿರೂಪಣೆಯೇ ಆಗಿವೆ. ಈ ವಿಚಾರವನ್ನು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಭಾಷಣ ಮಾಡುವ ಸಂದರ್ಭದಲ್ಲಿ ಗೊರೂರರೇ ಇದನ್ನು ಸ್ಪಷ್ಟ ಪಡಿಸಿದ್ದರ ಬಗೆಗೆ ಪ್ರಧಾನ ಗುರುದತ್ತರು ಗೊರೂರರ ಬಗೆಗೆ ಬರೆದ ಪುಸ್ತಕ ವೊಂದರಲ್ಲಿ ಗುರುತಿಸಿದ್ದಾರೆ. ಜೊತೆಗೆ ಈ ಬಗೆಯ ಚಿತ್ರಗಳನ್ನು ನೀಡಿರುವ ಕುವೆಂಪು ಅವರ ಮಲೆನಾಡಿನ ಚಿತ್ರಗಳೊಡನೆ ಹೋಲಿಸಿ ನೋಡಬಹುದಾದ ಹಾಗೂ ಹೋಲಿಕೆಯ ಅನಂತರದಲ್ಲು ವೈಶಿಷ್ಟ್ಯ ಮತ್ತು ಮೌಲಿಕತೆಯನ್ನು ಉಳಿಸಿಕೊಳ್ಳುವ ಕೃತಿಗಳಾಗಿ ಇವು ಉಳಿದುಕೊಳ್ಳುತ್ತವೆ ಎಂಬುದು ಮಹತ್ವದ ಸಂಗತಿ ಎಂಬುದಾಗಿಯೂ ತಿಳಿಸಿದ್ದಾರೆ.

ಹಾಗೆಯೇ ಗೊರೂರರ ಕಥೆಗಳನ್ನು ಕುರಿತು ಬರೆಯುತ್ತಾ ಪ್ರೊ. ಎಲ್.ಎಸ್. ಶೇಷಗಿರಿರಾವ್ ಅವರು ಹೀಗೆ ಹೇಳಿದ್ದಾರೆ. " ಗೊರೂರರ ಕಥೆಗಳಲ್ಲಿ ಉದ್ದೇಶಿತ ಕಲೆ ಇಲ್ಲ. ಆಧುನಿಕ ಸಂವೇದನೆಗೆ ಪ್ರಿಯವಾದ ಬಿಗಿಯಾದ ಬಂಧ, ಸೂಕ್ಷ್ಮತೆ, ಸಂಕೇತ, ಪ್ರತಿಮೆಗಳ ಬಳಕೆ ಇಲ್ಲ. ಎಷ್ಟೊ ಸಾರಿ ಕಥೆಗಾರರು ನೇರವಾಗಿ ಪ್ರವೇಶಮಾಡಿ ಅಭಿಪ್ರಾಯ ನೀಡುವುದೂ ಉಂಟು, ಹಲವು ಕಥೆಗಳು ಬರಿಯ ಪ್ರಬಂಧಗಳೇ ಆಗಿ ಉಳಿಯುತ್ತವೆ. ತಂತ್ರದ ಬಗೆಗೆ ಅವರು ಹೆಚ್ಚು ಆಲೋಚನೆ ಮಾಡಿದವರೇ ಅಲ್ಲ ಎಂದು ತೋರುತ್ತದೆ."*

ಪ್ರಬಂಧಗಳ ರಚನೆಯಲ್ಲಿ ಗೊರೂರರಿಗೆ ಮಹತ್ವವಾದ ಸ್ಥಾನವು ದೊರೆತಿದೆ. ಅವರ ಪ್ರಬುಧಗಳು ಜೀವಂತಿಕೆಯ ಲಕ್ಷಣಗಳಿಂದ ಕೂಡಿದವುಗಳಾಗಿವೆ. ಓದುಗರಲ್ಲಿ ಲವಲವಿಕೆಯನ್ನು ಉಂಟುಮಾಡುತ್ತವೆ. ತಮ್ಮ ಸುತ್ತ-ಮುತ್ತಲಿನ ಜೀವನ ಚಿತ್ರಣವನ್ನು ಕಣ್ಣಿಗೆ ಕಟ್ಟುವ ಹಾಗೆ ಸರಳ

* ಡಾ. ಗೊರೂರು-ಜೀವನ ಸಾಧನೆ- ಡಾ. ಸಿ.ಜಿ. ವೆಂಕಟಯ್ಯ ಪು. ಸ. ೯

ಸುಂದರವಾಗಿ ಚಿತ್ರಿಸುತ್ತಾರೆ. ಊರು-ಕೇರಿ, ಕೆರೆ, ಹೊಳೆ, ಬೆಟ್ಟಗುಡ್ಡ, ಕಾಡು-ಕಣಿವೆ, ದೇವಸ್ಥಾನ, ಹಬ್ಬ-ಹರಿದಿನಗಳ ಆಚರಣೆ, ತಮ್ಮ ಊರಿನ ಎಲ್ಲ ವರ್ಗದ ಜನ ಇವೆಲ್ಲವುಗಳ ಬಗೆಗೂ ವಿವರಣೆಯನ್ನು ನೀಡುತ್ತಾರೆ.

ಗೊರೂರರ ಪ್ರಬಂಧಗಳ ಬಗ್ಗೆ ವ್ಯಕ್ತವಾಗಿರುವ ಅಭಿಪ್ರಾಯವೊಂದು ಹೀಗಿದೆ.

" ಗೊರೂರರು ತಮ್ಮ ಪ್ರಬಂಧಗಳಲ್ಲಿ ಗ್ರಾಮ ಜೀವನದ ಸ್ವಚ್ಛ, ಶುಭ್ರ ಜೀವನವನ್ನು ಮಾತ್ರ ಪರಿಚಯಿಸಿದ್ದಾರೆಯೇ ಹೊರತು, ಆ ಜನರ ಬದುಕಿನ ಸಂಕೀರ್ಣಾವಸ್ಥೆಯ ಕೆಸರನ್ನಾಗಲಿ, ಘಾಟುಗಳನ್ನಾಗಲಿ ಇದುವರೆಗೆ ಚಿತ್ರಿಸಲು ಸಾಧ್ಯವಾಗಲಿಲ್ಲ ಎನಿಸುತ್ತದೆ. ಹಳ್ಳಿಯ ಬಾಳಿನ ಒಂದು ವಿಶಿಷ್ಟವಾದ ಕಂಪು ನೆಲದ ಕಮ್ಮೆನ್ನುವ ವಾಸನೆ ಇವರ ಪ್ರಬಂಧಗಳಲ್ಲಿ ಮೂಗಿಗೆ ಬಡಿಯುವುದಿಲ್ಲ. ಇದು ಅನಿವಾರ್ಯವೂ ಹೌದು. ಏಕೆಂದರೆ ಅವರು ಹುಟ್ಟಿ ಬೆಳೆದದ್ದು ಬ್ರಾಹ್ಮಣ ಸಮಾಜದಲ್ಲಿ ಆದ್ದರಿಂದ ಇವರು ಆ ಸಮಾಜದಲ್ಲಿದ್ದು ಅದರ ಒಳಹೊರಗನ್ನು, ಅದರ ಮೇಲೇರಿ ಇತರ ಸಮಾಜಗಳನ್ನೂ ನೋಡಲು ಸಾಧ್ಯವಾಗಿದೆಯೇ ಹೊರತು. ಇತರ ಸಮಾಜದವರ ಬದುಕಿನಲ್ಲಿ ಮುಳುಗಿ ಅವರಲ್ಲಿ ತಾವೂ ಒಬ್ಬರಾಗಿ ನೋಡಲು ಸಾಧ್ಯವಾಗಿಲ್ಲ" ಗೊರೂರರ ಕೃತಿಗಳ ಸಾಂಸ್ಕೃತಿಕ ಅಧ್ಯಯನ ಎಂಬ ಕೃತಿಗೆ ಮುನ್ನುಡಿಯನ್ನು ಬರೆಯುತ್ತಾ ಈ ವಿಚಾರದ ಬಗೆಗೆ ಸಿ.ಪಿ. ಕೃಷ್ಣಕುಮಾರ್ ರವರು ಈ ರೀತಿ ಪ್ರತಿಕ್ರಿಯೆ ನೀಡಿದ್ದಾರೆ. " ಕುವೆಂಪು. ಕಾರಂತ, ಗೊರೂರರಂತವರಲ್ಲಿ ಮಣ್ಣಿನ ವಾಸನೆ ಇಲ್ಲವೆಂದರೆ ಅದು ಮತ್ತ್ಯಾರಲ್ಲೂ ಇಲ್ಲವೆನ್ನಬೇಕಾಗುತ್ತದೆ."* ಇದು ಎಲ್ಲರೂ ಒಪ್ಪುವಂತಹ ಮಾತಾಗಿದೆ.

ಹಾಗೆಯೆ ಎಸ್. ಪ್ರಹ್ಲಾದರಾಯರು ಗೊರೂರರ ಪ್ರಬಂಧಗಳ ವೈಶಿಷ್ಟ್ಯವನ್ನು ಈ ರೀತಿಯಾಗಿ ಗುರುತಿಸಿದ್ದಾರೆ. " ಆ ಕ್ಷೇತ್ರ ( ಪ್ರಬಂಧಗಳ ಕ್ಷೇತ್ರ) ದಲ್ಲೂ ಅವರದು ಕಥೆಗಾರನ ನಡಿಗೆಯೇ. ಅಮೂರ್ತವಾದ ಅಭಿಪ್ರಾಯಗಳ ಮಂಡನೆ, ವಿಶ್ಲೇಷಣೆ-ಇವು ಅವರ ಕ್ರಮವೇ ಅಲ್ಲ. ಎಂಥ ಜಟಿಲ ಸಮಸ್ಯೆಯನ್ನಾದರೂ ಅವರು ಸ್ಪಷ್ಟ, ಮೂರ್ತ ಜೀವನ ಚಿತ್ರಣಗಳಿಂದ ಸುಲಭವಾಗಿ ಬಿಡಿಸುತ್ತಾರೆ." *

•ಗೊರೂರು ಜೀವನ- ಸಾಧನೆ ಪು. ಸಂ. ೩೨

* ಗೊರೂರು ಗೌರವ ಗ್ರಂಥ, ಪೂರ್ವೋಕ್ತ. ಪು. ೨೧೮

ಪ್ರಬಂಧ ಎಂದಾಕ್ಷಣ ಒಂದು ವಿಷಯ ಅಥವಾ ವಸ್ತುವಿರುತ್ತದೆ. ಲೇಖಕನ ಕಲ್ಪನೆ, ವಿಚಾರಲಹರಿಗಳು ಅದರ ಸುತ್ತಲೂ ಹರಿಯುವುದು. ಇತರ ವಿಚಾರಗಳನ್ನು ಅದರ ಜೊತೆಯಲ್ಲಿ ಹೆಣೆಯುವ ಜಾಣ್ಮೆ, ಹಾಸ್ಯ, ವಿನೋಧಗಳನ್ನು ಸಂದರ್ಭಕ್ಕೆ ತಕ್ಕ ಹಾಗೆ ತರುವುದು. ಇವೆಲ್ಲವುಗಳನ್ನು ಒಳಗೊಂಡಿರುವಂತಹದ್ದು ಪ್ರಬಂಧವೆಂದು ನಾವು ಭಾವಿಸುತ್ತೇವೆ. ಆದರೆ ಗೊರೂರರ ಪ್ರಬಂಧಗಳು ಈ ರೀತಿ ಯಾವುದೇ ತಂತ್ರ, ಸೂತ್ರಗಳಿಗೆ ಕಟ್ಟುಬಿದ್ದವುಗಳಲ್ಲ. ಇಂತಹ ಒಂದು ನಿರ್ದಿಷ್ಟ ಸೂತ್ರಕ್ಕೆ ಅಳವಡಿಸಿ ಅವುಗಳನ್ನು ನೋಡಲು ಕೆಲವೊಮ್ಮೆ ಸಾಧ್ಯವಾಗುವುದಿಲ್ಲ. ಆದ್ದರಿಂದಲೇ ಅವರ ಪ್ರಬಂಧ, ಕಥೆ, ವಿನೋದ ಚಿತ್ರಗಳನ್ನು ಬೇರೆ-ಬೇರೆ ಮಾಡಿ ನೋಡಿದಾಗಲೂ ವ್ಯತ್ಯಾಸ ಕಂಡುಬರುವುದಿಲ್ಲ. ಇವರ ಪ್ರಬಂಧಗಳ ವಿಶೇಷತೆಗಳನ್ನು ಮುಂದಿನ ಅಧ್ಯಾಯಗಳಲ್ಲಿ ಪರಿಶೀಲಿಸುವ ಪ್ರಯತ್ನ ಮಾಡಲಾಗಿದೆ.

# ಅಧ್ಯಾಯ - ೩

## ವಸ್ತುವಿನ ವೈವಿದ್ಯತೆ ಮತ್ತು ಕಥಾ ವಿನ್ಯಾಸ

ಕನ್ನಡ ಪ್ರಬಂಧಕಾರರು ವೈವಿಧ್ಯಮಯ ವಿಚಾರಗಳನ್ನು ತಮ್ಮ ಪ್ರಬಂಧದ ವಿಷಯಗಳಿಗಾಗಿ ಆಯ್ಕೆ ಮಾಡಿಕೊಂಡಿರುವುದು. ಈ ಪ್ರಕಾರಕ್ಕೂ ಕನ್ನಡ ಗದ್ಯಕ್ಕೂ ಹೊಸ ಆಯಾಮಗಳನ್ನು ತರುವಲ್ಲಿ ಸಹಕಾರಿಯಾಗಿದೆ. ವಸ್ತು ವೈವಿಧ್ಯವು ಏಕತಾನತೆಯನ್ನು ಹೊಗಲಾಡಿಸಿ ಓದುಗರಲ್ಲಿ ಲವಲವಿಕೆಯನ್ನು ಉಂಟುಮಾಡುವಲ್ಲಿಯೂ ಸಹಾಯಕವಾಗಿದೆ.

ಗೊರೂರರು ಸಹ ತಮ್ಮ ಪ್ರಬಂಧಗಳಲ್ಲಿ ವೈವಿಧ್ಯಮಯವಾದ ವಸ್ತುಗಳನ್ನು ಬಳಸಿಕೊಂಡಿರುವುದು ಸಹಜವಾದರೂ ಆ ಎಲ್ಲ ವಸ್ತುಗಳೂ ಸಹ ಗ್ರಾಮೀಣತೆಯ ಸೊಗಡಿನಿಂದ ಹೊರತಾದವುಗಳಲ್ಲ ಎಂಬುದೂ ಸಹ ಅಷ್ಟೆ ಸತ್ಯವಾದ ಮಾತಾಗಿದೆ. ಗೊರೂರರ ಪ್ರಬಂಧಗಳಿಗೆ ವಸ್ತುವಾಗಿರುವಂತಹ ವಿಷಯಗಳಲ್ಲಿ ಕೆಲವನ್ನಾದರೂ ನಾವು ಇಲ್ಲಿ ಪರಿಶೀಲಿಸಬಹುದಾಗಿದೆ. ನದಿ, ಹಬ್ಬ, ಜಾತ್ರೆ, ಬಯಲಾಟ, ಭೂತ, ಬೆಟ್ಟಗುಡ್ಡ, ಸೇತುವೆ, ಸಾವು, ಬಸ್ಸು ಮುಂತಾದವುಗಳೆಲ್ಲವೂ ಸ್ಥಾನ ಪಡೆದುಕೊಳ್ಳುತ್ತವೆ.

ಗೊರೂರರ ಬಹುಪಾಲು ಕೃತಿಗಳಿಗೆ ಹೇಮಾವತಿ ನದಿಯೇ ವಸ್ತುವಾಗಿದೆ. ಅವರ ಕೃತಿ ರಚನೆಗೆ ಈ ನದಿಯೇ ಪ್ರೇರಕ ಶಕ್ತಿಯೂ ಆಗಿದೆ. ಅವರ ಹಲವಾರು ಕೃತಿಗಳಲ್ಲಿ ನದಿಯೇ ನಾಯಕಿಯಾಗುತ್ತಾಳೆ. ಅವರ ಒಂದು ಪ್ರಬಂಧ ಸಂಕಲನಕ್ಕೆ ಇರುವ ಹೆಸರೂ ' **ಹೇಮಾವತಿ ತೀರದಲ್ಲಿ ಮತ್ತು ಇತರ ಪ್ರಬಂಧಗಳು**' ಎಂಬುದಾಗಿಯೇ ಇದೆ. ಹಾಗೆಯೇ ಅವರ ಒಂದು ಕಾದಂಬರಿಯ ಹೆಸರೂ ಕೂಡ ಹೇಮಾವತಿ.

ಗೊರೂರರಿಗೆ ಹೇಮಾವತಿ ನದಿಯ ಬಗೆಗೆ ಇದ್ದ ಪ್ರೀತಿಯು ಅವರು ಹೇಮಾವತಿ ತೀರದಲ್ಲಿ ಎಂಬ ಪ್ರಬಂಧದಲ್ಲಿ ಈ ರೀತಿ ವ್ಯಕ್ತವಾಗಿದೆ.

" ಹೇಮಾವತಿ ನದಿ ನಮ್ಮೂರ ಉಸಿರು ನದಿಯ ದಡದಲ್ಲಿ ನಿಂತುಕೊಂಡು ನೋಡಿದರೆ ನದಿ ನಮ್ಮೂರ ಬಳಿ ಇರುವಷ್ಟು ಸುಂದರವಾಗಿ, ಸೊಗಸಾಗಿ ಮತ್ತೆಲ್ಲೂ ಇಲ್ಲವೆಂದು ಯಾರಿಗಾದರೂ ತೋರುವುದು. ನರಸಿಂಹ ಸ್ವಾಮಿ ದೇವಸ್ಥಾನದ ಮುಂದುಗಡೆ ಎಡಗಡೆಯೂ ಬಲಗಡೆಯೂ ನೋಡಿದರೆ ನೂರಾರು ತೋಪುಗಳ ಗೊಂಚಲುಗಳು ಕಣ್ಣಿಗೆ ವಿಶ್ರಾಂತಿಯನ್ನು ಕೊಡುವುವು ನದಿಯ ಎರಡು ದಡಗಳಲ್ಲೂ ಮರಗಳ ಕೊಂಬೆಗಳು ನದಿಯ ಮೇಲೆ ಬಾಗಿದ್ದು ನೀರನ್ನು ಮುತ್ತಿಡುತ್ತಾ ನದಿಯ ರೆಪ್ಪೆಗಳಂತೆ ಕಾಣುವುವು. ನದಿಯಿಂದ ಮೇಲೆ ಪಶ್ಚಿಮಕ್ಕೆ ಒಂದು ಮೈಲಿ ಹೋದರೆ ಈಶ್ವರನನ್ನು ತಪಸ್ಸಿಗೆ ಆಕರ್ಷಿಸುವಷ್ಟು ರಮಣೀಯವೂ ಶಾಂತವೂ ಆದ ಸಂಗಮ ಮತ್ತು ತೋಪು, ಹೇಮಾವತಿ ನದಿಯು ನಮ್ಮ ಪ್ರಾಂತ್ಯಕ್ಕೆ ಜೀವವನ್ನು ಕೊಡುವ ಜೀವನಾಡಿ ಅದರ ಸ್ಪರ್ಶದಿಂದ ಪವಿತ್ರವೂ ಚೆನ್ನೂ ಆದ ನಮ್ಮ ನಾಡು ದೇವಲೋಕದ ನಂದನವನಕ್ಕೆ ಎಣೆಯಾದುದು." *

ಗೊರೂರರು ಗ್ರಾಮ ಜೀವನವನ್ನು ಪ್ರಮುಖವಸ್ತುವನ್ನಾಗಿ ಬಳಸಿಕೊಳ್ಳುತ್ತಾರೆ. ಕಾಯಕ ನಿಷ್ಠೆ ಗ್ರಾಮ ಜೀವನದ ಪ್ರಮುಖ ವೈಶಿಷ್ಟ್ಯ. ಈ ಕಾಯಕ ನಿಷ್ಠೆಗೆ '**ಸಫಲ ಜೀವನ**' ಪ್ರಬಂಧದ ವೆಂಕಟರಾಯರು '**ಬೆಸ್ತರ ಕರಿಯ**'ದ ಕರಿಯ ಮುಂತಾದ ಪಾತ್ರಗಳನ್ನು ಗಮನಿಸಬುದಾಗಿದೆ. " ಚಳಿ, ಮಳೆ, ಗಾಳಿ ಬಿಸಿಲು ಎಲ್ಲಾ ಕಾಲದಲ್ಲಿಯೂ ಅವನ ಉಡುಪು ಒಂದೇ ಸಮ. ತಾವರೆಯ ಎಲೆಯ ಮೇಲಿನ ನೀರು ಎನ್ನುತ್ತಾರಲ್ಲ ಹಾಗೆ ಕರಿಯನ ಬಾಳು ಅವನು ಜಗತ್ತಿನಲ್ಲಿದ್ದರೂ ಜಗತ್ತಿಗೆ ಸೇರದವನಂತೆಯೇ ಇರುತ್ತಾನೆ. ಅವನ ಅನಾಸಕ್ತಿ ಅದ್ಭುತ. ತಾನು ಹಿಡಿದ ಮೀನನ್ನು ಕೇಳಿದವರಿಗೆ ಕೊಡುವ ಔದಾರ್ಯವಂತು ಇರಲಿ ಅವನ ಮದುವೆಗಳ ಸಂಬಂಧದಲ್ಲಿ ಅವನು ವ್ಯಕ್ತಪಡಿಸಿದ ಅನಾಸಕ್ತಿ ಎಂತಹ ಯೋಗಿಗಳಲ್ಲಿಯೂ ಕಾಣದ ಶಕ್ತಿ..... ಕರಿಯನಿಗೆ ಬಾಲ್ಯವೂ ಇಲ್ಲ ಮುಪ್ಪೂ ಇಲ್ಲ. ಶತ್ರುಗಳೂ ಇಲ್ಲ. ಮತ್ತರೂ ಇಲ್ಲ......"*

* ಹೇಮಾವತಿ ತೀರದಲ್ಲಿ ಇತರ ಪ್ರಬಂಧಗಳು ಪು. ಸಂ. ೧

* ಬೆಸ್ತ ಕರಿಯ ಪು. ಸಂ. ೮,೯,೧೦.

ಹಾಗೆಯೇ ವೆಂಕಟರಾಯರು ಕಾಯಕದಲ್ಲಿಯೇ ದೇವರನ್ನು ಕಾಣುವಂತಹವರು. " ಕೆಲವರು ಹಾಸಿಗೆಯಿಂದ ಎದ್ದ ಕೂಡಲೆ ದೇವರನ್ನು ಧ್ಯಾನಿಸುವಂತೆ ವೆಂಕಟರಾಯರು ಎದ್ದ ಕೂಡಲೇ ತೋಟದಲ್ಲಿ ಏನು ಕೆಲಸ ಎಂದು ಯೋಚಿಸುತ್ತಿದ್ದರು. ಇಂತಹ ಕಾಯಕ ನಿಷ್ಠೆಯ ಫಲವಾಗಿಯೇ ಮರದ ಮೇಲೇಯೇ ಹಣ್ಣಾಗಿ ಕೆಲವು ಹಣ್ಣುಗಳು ಬಿರಿದ್ದ ರಸಬಾಳೆಯ ಗೊನೆಯಲ್ಲಿಯೇ ಭಗವಂತ ಪ್ರತ್ಯಕ್ಷನಾದಂತೆ ಅವರ ಮನಸ್ಸು ಧ್ಯಾನಪರವಾಗುತ್ತಿತ್ತು."*

ಗೊರೂರರು ಗಂಭೀರ ಪ್ರಬಂಧಗಳನ್ನೂ ಬರೆದು ಅಂಥ ವಿಷಯಗಳನ್ನು ಸೂಕ್ಷ್ಮವಾಗಿ, ಆಳವಾಗಿ, ವಿಶ್ಲೇಷಿಸಿ ಕೊಡಬಲ್ಲರು ಈ ಹೇಳಿಕೆಗೆ ಅವರ ಪ್ರಬಂಧಗಳಲ್ಲಿ ಸಾಕಷ್ಟು ನಿದರ್ಶನಗಳನ್ನು ಕಾಣಬಹುದು. ಲಲಿತ ಪ್ರಬಂಧದಲ್ಲಿ ಗಂಭೀರ ಚಿಂತನೆಯೂ ಹೇಗೆ ಸ್ಥಾನ ಪಡೆಯುತ್ತವೆ ಎಂಬುದಕ್ಕೇ **'ಒಂದು ಸಂಜೆ'** ಪ್ರಬಂಧವನ್ನು ತೆಗೆದುಕೊಳ್ಳಬಹುದು.

" ಈ ಕೆಟ್ಟು ಹೋದ ಕಾಲದಲ್ಲಿ" ಸಹ ಕಾಲಕ್ಕೆ ಸರಿಯಾಗಿ ಮಳೆ ಭೋರ್ಗರೆಯುತ್ತಿತ್ತು, ಗುಡುಗು, ಮಿಂಚು, ಬಿರುಗಾಳಿ, ಮೇಘರಾಜನ ಆಗಮನದ ವಂದಿಮಾಗಧರಾಗಿ ಮೊದಲು ಬರುತ್ತಿದ್ದರು. ಈಗಿನವರಾದ ನಮಗೆ ರಾಜನೂ ಬೇಡ, ವಂದಿಮಾಗಧರೂ ಬೇಡ, ಆದರೆ ಮಳೆ, ಗುಡುಗು, ಮಿಂಚು ಬಿರುಗಾಳಿಗಳೆಲ್ಲ ಬೇಕಲ್ಲ? ಆದರೆ ಈಗ ಬಿರುಗಾಳಿಯೇ ಅಪರೂಪವಾಯಿತು ದರಿದ್ರನಾದವನು ಎಲ್ಲ ಅವಸ್ಥೆಗಳಲ್ಲೂ ಎಲ್ಲ ಕಾಲಗಳಲ್ಲೂ ಒಂದೇ ಸಮನಾಗಿರುವಂತೆ, ಒಂದೇ ಬಗೆಯ ಉಡುಪನ್ನು ಧರಿಸುವಂತೆ ಗಾಳಿ ಈಗ ಯಾವಾಗಲೂ ಒಂದೇ ಸಮನಾಗಿದೆ. ಕವಿಗಳು ಹೇಳುವ ಮಂದ ಮಾರುತ, ಮಲೆಯ ಮಾರುತ, ಮೆಲುನಡೆಯ ಮಾರುತ, ತಂಗಾಳಿ, ಎರಲುಗಾಳಿ ಇವೆಲ್ಲ ಇರಲಿ', ನಮ್ಮ ಕಣ್ಣಿಗೆ ಕಾಣುತ್ತಿದ್ದ ಬಿರುಗಾಳಿ ಸುಂಟರಗಾಳಿಗಳು ಸಹ ಈಗ ಮಾಯವಾಗಬೇಕೇ?. ಆಗ ಒಂದು ಬಿರುಗಾಳಿ ಎದ್ದರೆ ಭೂಮಿಯನ್ನು

* ಬೆಟ್ಟದ ಮನೆಯಲ್ಲಿ ಇತರ ಪ್ರಬಂಧಗಳು ಪು. ಸಂ. ೧೧೬

ಒಂದು ಕಡೆಯಿಂದ ಚಾಪೆಯಂತೆ ಸುತ್ತಿಕೊಂಡು ಹೋಗಿಬಿಡುತ್ತಿತ್ತು. ಆಗಿನ ಕಾಲದಲ್ಲಿ ಹುಡುಗರಾದ ನಮಗೆ ಕತೆ ಹೇಳುವಾಗ ಹಿರಣ್ಯಾಕ್ಷ ಭೂಮಿಯನ್ನು ಸುತ್ತಿಕೊಂಡು ಹೋದುದನ್ನು ಹೇಳಲು ಬಿರುಗಾಳಿಯ ಉದಾಹರಣೆಯನ್ನು ಹೇಳುತ್ತಿದ್ದರು."*

ಗೊರೂರರ ಪ್ರಬಂಧಗಳಲ್ಲಿ ಸ್ಥಾನ ಪಡೆದುಕೊಂಡತಹ ವಿಷಯಗಳಲ್ಲಿ ತಿಗಣೆಯೂ ಒಂದು. ತೀರ ನಗಣ್ಯ ಎಂದುಕೊಳ್ಳುವ ವಿಚಾರ, ವಸ್ತುಗಳೂ ಬರಹದ ವಿಷಯಗಳಾಗುತ್ತವೆ ಎಂಬುದಕ್ಕೆ ಇದು ಉತ್ತಮ ಉದಾಹರಣೆಯಾಗುತ್ತದೆ. ತಿಗಣೆಯ ಬಗೆಗೆ ಲೇಖಕರಿಗೆ ಇದ್ದ ಪ್ರೀತಿ ಅಪಾರವಾದುದು. " ಮನುಷ್ಯನೊಂದಿಗೆ ಹೊಂದಿಕೊಂಡು ಅವನಲ್ಲಿ ಸ್ನೇಹಿತನಾಗಿ ಅವನಿಗೆ ಸಮಾನವಾಗಿರುವ ಕ್ರಿಮಿ ಎಂದರೆ ತಿಗಟೆಯ ತಿಗಣೆಯ ಮೇಲೆ ನನಗೆ ಅತಿಪ್ರೀತಿ ಬೇಕಾದದ್ದಾದರೂ ಅದರ ಒಂದು ಕೂದಲಿಗೂ ತೊಂದರೆಯಾಗುವುದಕ್ಕೆ ನಾನು ಅವಕಾಶ ಕೊಡುವುದಿಲ್ಲ ಎಂಬುದಾಗಿ ಹೇಳುವ ಅವರು ಅದಕ್ಕೆ ಕಾರಣವನ್ನು ಕೊಡುತ್ತಾರೆ, ಅದೆಂದರೆ ಒಂದು ಸಲ ಅದು ನನ್ನ ಮಾನವನ್ನು ಕಾಪಾಡಿತು ಮುಂದೆ ಎಂದಾದರೂ ಇಲಿ ಸಿಂಹದ ಪ್ರಾಣವನ್ನು ಕಾಪಾಡಿದಂತೆ ತಿಗಣೆಯೂ ನನ್ನ ಪ್ರಾಣವನ್ನು ಕಾಪಾಡಬಹುದು" * ಎನ್ನುತ್ತಾರೆ.

ಗೊರೂರರು ಗ್ರಾಮ ಜೀವನವನ್ನು ತಮ್ಮ ಕೃತಿಗಳಿಗೆ ಪ್ರಮುಖವಾಗಿ ಬಳಸಿಕೊಳ್ಳುತ್ತಾರೆ. ಗ್ರಾಮ ಜೀವನದಲ್ಲಿ ಪ್ರಮುಖವಾಗಿ ಹಾಸುಹೊಕ್ಕಾಗಿರುವ ಹಬ್ಬ ಹರಿದಿನಗಳು ಜಾತ್ರೆ, ಮದುವೆ ಸಂಪ್ರದಾಯಗಳೂ ಸಹಜವಾಗಿಯೇ ಅವರ ಬರವಣಿಗೆಯ ವಸ್ತುಗಳಾಗುತ್ತವೆ. ಕಾಮನಹಬ್ಬ ಬಿಂದಿಗಮ್ಮನ ಜಾತ್ರೆ, ಯೋಗನರಸಿಂಹಸ್ವಾಮಿಯ ಜಾತ್ರೆ ಇವುಗಳನ್ನು ನಿದರ್ಶನಕ್ಕಾಗಿ ನೋಡಬಹುದಾಗಿದೆ.

---

* ಹೇಮಾವತಿ ತೀರದಲ್ಲಿ ಇತರ ಪ್ರಬಂಧಗಳು ಪು. ಸಂ. ೧೦೬,೧೦೭
* ಬೆಸ್ತರ ಕರಿಯ – ಪು. ಸ. ೧೧

ಬ್ರಾಹ್ಮಣ ಸಮಾಜದಲ್ಲಿ ಬೆಳೆದು ಬಂದಿರುವ ನಡವಳಿಕೆ ಜೀವನ ವಿಧಾನಗಳನ್ನು ಲಘು ಹಾಸ್ಯದ ಮೂಲಕವೇ ವಿಡಂಬಿಸುತ್ತಾರೆ. ಬ್ರಾಹ್ಮಣರಲ್ಲಿಯೇ ಬ್ರಾಹ್ಮಣರಾಗದ ಅನೇಕರನ್ನು ಗುರುತಿಸುತ್ತಾರೆ. ಹೀಗಾಗಿ ಬ್ರಾಹ್ಮಣ್ಯದ ಅರ್ಥವಿಲ್ಲದ ಆಚರಣೆಗಳೂ ಇವರ ವಿಡಂಬನೆಗೆ ಗುರಿಯಾಗುತ್ತವೆ.

" ನಮ್ಮ ಊರ ಹಾರುವರ ಶೌರ್ಯ', 'ಆಚಾರಕೆಟ್ಟರೂ ಆಕಾರ ಕೆಡಬಾರದು', 'ಗರುಡ ಗಂಬದ ದಾಸಯ್ಯ', ಕ್ಷೌರ, ' ಹಾರುವಯ್ಯ ಹಜಾಮನಾದದ್ದು', ಮುಂತಾದ ಪ್ರಬಂಧಗಳನ್ನು ಪರಿಶೀಲಿಸಿದಾಗ ಗೊತ್ತಾಗುತ್ತದೆ. ಇವರ ಕಥಾ ಸಂವಿಧಾನ ಸಂಪ್ರದಾಯದ ಸರಳ ವಿರೋಧ ಎಂಬುದು ಇದರಿಂದ ತಿಳಿದು ಬರುತ್ತದೆ.

ಹಾಸ್ಯ ಗೊರೂರರ ಕೃತಿಗಳಲ್ಲಿ ಪ್ರಮುಖ ಪಾತ್ರವಹಿಸುತ್ತದೆ ಈ ಹಾಸ್ಯ ನಕ್ಕು ಹೊಟ್ಟೆಹುಣ್ಣಾಗಿಸುವಂತಹದ್ದಲ್ಲ, ನವುರಾದ, ತಿಳಿಹಾಸ್ಯ, ಸಮಾಜದ ಎಷ್ಟೋ ಅರೆ-ಕೋರೆಗಳನ್ನು, ಸಂಪ್ರದಾಯ ಆಚರಣೆಗಳನ್ನು ಹಾಸ್ಯದ ಮೂಲಕವೇ ವಿಡಂಬಿಸುತ್ತಾರೆ. ಇವರ ' ನಮ್ಮ ಊರಿನ ರಸಿಕರು' ಕೃತಿಯು ಹೆಸರೇ ಸೂಚಿಸುವಂತೆ ಆ ಊರಿನ ವಿನೋದ ಪ್ರಿಯರ ಬಗೆಗೆ ತಿಳಿಸುವುದಾಗಿದೆ. ಇಂತಹ ವಿನೋದಪ್ರಿಯ ರಸಿಕರಿಗೆ ರಂಗಸ್ಥಳವಾಗಿರುವ ತಮ್ಮ ಊರನ್ನು ಲೇಖಕರು ತುಂಬ ಭಾವುಕರಾಗಿ ವರ್ಣಿಸುತ್ತಾರೆ. " ನಮ್ಮ ಊರಿನವರೆಲ್ಲಾ ಬಹಳ ರಸಿಕರು. ಅಲ್ಲಿ ವಿನೋದ ಪ್ರಿಯರಲ್ಲದವರು ಯಾರೂ ಸಿಕ್ಕುವುದಿಲ್ಲ. ಕೋಪಿಷ್ಠರಾಗಲಿ ಮುಖವನ್ನು ಗಂಟು ಹಾಕಿಕೊಳ್ಳುವವರಾಗಲಿ ಅಲ್ಲಿಗೆ ಬಂದರೆ ಕೂಡಲೆ ಮಾಯವಾಗಿ ಬಿಡುತ್ತಾರೆ ಅಥವಾ ಮುಂಗೋಪವನ್ನು ಬಿಟ್ಟು ಎಲ್ಲರಂತೆ ಕೂಡಲೇ ನಗಲು ಪ್ರಾರಂಭಿಸುತ್ತರೆ."*

* ನಮ್ಮ ಊರಿನ ರಸಿಕರು ಪು. ಸಂ. ೨೨,೨೩.

ಪ್ರಾಣಿಪ್ರಪಂಚಕ್ಕೂ ಸಹ ತಮ್ಮ ಸಾಹಿತ್ಯದಲ್ಲಿ ವಿಶೇಷತೆಯನ್ನು ನೀಡಿದ್ದಾರೆ. ಇವರ ಪ್ರಬಂಧಗಳಲ್ಲಿ ಸ್ಥಾನ ಪಡೆದುಕೊಂಡಿರುವ ಪ್ರಾಣಿ ಎಮ್ಮೆ ' ನಮ್ಮ ಎಮ್ಮೆಗೆ ಮಾತು ತಿಳಿವುದೇ' ಪ್ರಬಂಧವನ್ನು ನಿದರ್ಶನವಾಗಿ ನೋಡಬಹುದು." ಎಮ್ಮೆಗೆ ಒಂದು ಸಲ ಕಾಲುಜ್ವರ ಬಾಯಿಜ್ವರ ಆಯಿತು ಆಳು ತೂರ ಎಲ್ಲಾ ಹಸುಗಳನ್ನು ಬೋರೆಗೆ ಬಿಡುತ್ತಿದ್ದ. " ಎಮ್ಮೆ ಬಿಡಬೇಡ ದನಿನ ಅಸ್ಪತ್ರೆಯಿಂದ ಔಷಧಿ ತರಿಸಿ ಹುಯ್ಯಿಸುತ್ತೇನೆ." ಎಂದೆ ಆ ಮಾತು ಅಲ್ಲೇ ನಿಂತಿದ್ದ ಎಮ್ಮೆಗೆ ಕೇಳಿಸಿರಬೇಕು ನಾವು ಒಳಕ್ಕೆ ಹೋದಾಗ ಎಮ್ಮೆ ಕಿತ್ತುಕೊಂಡು ಬೋರಿಗೆ ಓಡಿಬಿಟ್ಟಿತು. ಈ ಎಮ್ಮೆ ರಾಗಿಯ ಅಂಬಲಿಯನ್ನು ಮಾತ್ರ ಯಾವಾಗಲೂ ಕುಡಿಯುತ್ತದೆ. ಇದಕ್ಕೆ ಕಾಲುಜ್ವರ ಬಾಯಿಜ್ವರವಾದಾಗ " ಇದನ್ನು ಹಿಡಿದುಕೊಂಡು ಗಂಟಲಿಗೆ ಗೊಟ್ಟುಹಾಕಿ ಔಷಧಿ ಹುಯ್ಯುವುದು ಕಷ್ಟ. ಅಂಬಲಿಗೆ ಸೇರಿಸಿಕೊಟ್ಟು ಬಿಡೋಣ " ಎಂದಳು.........
ಈ ಸಾಯಂಕಾಲ ದನದ ವೈದ್ಯರು ಮನೆಗೆ ಬಂದು ಎಮ್ಮೆ ನೋಡಿದರು. " ಇದಕ್ಕೆ ಔಷಧಿ ಹೇಗೆ ಕುಡಿಸುತ್ತೀರಿ" ಎಂದರು ಆಳು ತೂರ " ಅಂಬಲಿ ಒಳಗೆ ಕುಡೀತದೆ" ಎಂದ ಆ ಮಾತು ಎಮ್ಮೆಗೆ ಕೇಳಿಸಿತು. ಆ ಸಂಧ್ಯಾ ಕಾಲದಿಂದಲೇ ಅದು ಅಂಬಲಿ ಕುಡಿಯುವುದನ್ನು ಬಿಟ್ಟಿತು."*

ಹೀಗೆ ಎಲ್ಲ ವಿಧಧ ವಸ್ತುಗಳನ್ನು ಪ್ರಾಣಿಗಳನ್ನು ತಮ್ಮ ಸಾಹಿತ್ಯದಲ್ಲಿ ಬಳಸಿಕೊಳ್ಳುವುದರ ಮೂಲಕ ವಸ್ತುವೈವಿಧ್ಯ ತೆಯನ್ನು ಮೆರೆದಿದ್ದಾರೆ. ಆ ಮೂಲಕ ವಸ್ತು ವೈವಿಧ್ಯತೆಯನ್ನು ಮೆರೆದಿದ್ದಾರೆ. ಆ ಮೂಲಕ ಕನ್ನಡ ಗದ್ಯ ಸಾಹಿತ್ಯದ ಪ್ರಮುಖ ಕವಿ ಎಂಬ ಹೆಗ್ಗಳಿಕೆಗೂ ಸಹ ಗೊರೂರರು ಪಾತ್ರರಾಗಿದ್ದಾರೆ.

* ಬೆಸ್ತರ ಕರಿಯ ಪು. ಸಂ. ೩೭

# ಕಥಾ ವಿನ್ಯಾಸ

ಗೊರೂರರು ಪ್ರಮುಖವಾಗಿ ಜನಪದ ಸಾಹಿತಿ. ಏಕೆಂದರೆ ಅವರು ತಾವು ಹುಟ್ಟಿಬೆಳೆದ ಹಳ್ಳಿಯ ಹಾಗೂ ಹಳ್ಳಿಯ ಸುತ್ತಮುತ್ತಲಿನ ಜನ-ಜೀವನದ ಚಿತ್ರಣವನ್ನು ಕಣ್ಣಿಗೆ ಕಟ್ಟಿದಂತೆ ಚಿತ್ರಿಸಿ ತೋರಿಸುತ್ತಾರೆ. ಒಂದು ಹಳ್ಳಿಯ ಮೂಲಕ ಇಡೀ ಕರ್ನಾಟಕದ, ಭಾರತದ ಪ್ರತಿನಿಧಿ ಎಂಬಂತೆ ತರುತ್ತಾರೆ. ತಾವು ಬೆಳೆದ ಪರಿಸರದ ಸಂಪ್ರದಾಯ ಜನಪದ ಸಂಸ್ಕೃತಿಯನ್ನು ದಾಖಲಿಸುತ್ತಾರೆ. ಇವರ ಕಥಾ ಶೈಲಿಯನ್ನು ಸಿ. ಜಿ. ವೆಂಕಟಯ್ಯನವರು ಹೀಗೆ ಗುರುತಿಸುತ್ತಾರೆ.

"ಗೊರೂರರು ಮುಖ್ಯವಾಗಿ ಕಥಾನಿರೂಪಣೆಗೆ ಹೆಚ್ಚು ಒತ್ತುಕೊಡುತ್ತಾರೆಯೇ ವಿನಾ ಪಾತ್ರಗಳ ಘರ್ಷಣೆ, ವೈಯಕ್ತಿಕ, ಆಶೋತ್ತರ, ಒಳತೋಟಿಗಳಿಗೆ ಹೆಚ್ಚು ಪ್ರಾಧಾನ್ಯ ನೀಡುವುದಿಲ್ಲ. ಅವರು ಕಥೆ ಹೇಳುವ ವಿಧಾನವೂ folk narrative style ಆಗಿದ್ದು ಓದುಗನನ್ನು ಆಕರ್ಷಿಸುತ್ತದೆ. ಪರಂಪರೆ ಮತ್ತು ಸಾಂಪ್ರದಾಯಿಕ ಮೌಲ್ಯಗಳ ಹೆಗಲ ಮೇಲೆ ಕುಳಿತು ವ್ಯಕ್ತಿಗತ ಮೌಲ್ಯಗಳಿಗಿಂತ ಸಮಷ್ಟಿ ಮೌಲ್ಯಗಳ ಕಡೆಗೆ ಕೈಚಾಚುವ ಕ್ರಿಯೆ ಇವ ಬಹುಪಾಲು ಕಥೆಗಳಲ್ಲಿ ವ್ಯಕ್ತವಾಗುತ್ತದೆ. ಸಿದ್ಧಮೌಲ್ಯ ಗಳ ಯಾವುದೇ ಜಾಡ್ಯಗಳಿಗೂ ಬಲಿಯಾಗದೆ ಆನೆ ನಡೆದುದೇ ಮಾರ್ಗವೆನ್ನುವಂತೆ ನಡೆಯುತ್ತಾರೆ ಸಾಮಾಜಿಕ ವ್ಯವಸ್ಥೆಯನ್ನು ಆತ್ಮೀಯತೆಯಿಂದ ಚಿತ್ರಿಸುತ್ತಾರೆ".*

ಗೊರೂರರು ಕಥೆ ಹೇಳುವ ರೀತಿ ಸರಳ ಸುಂದರ ಯಾವುದೇ ಒಂದು ವಿಷಯದ ಬಗೆಗೆ ಬರೆಯುವಾಗಲೂ ಕತೆ ನಡೆಯುವ ಕಾಲ ಯಾವುದೇ ಆಗಿರಲಿ ಕತೆಯ ಪಾತ್ರ ಹಳ್ಳಿಯ ಕಡುಬಡವನಾಗಿರಲಿ, ಮನೆಯ ಆಳಾಗಿರಲಿ ಆ ಕಾಲ/ ಕತೆ ಇಂದಿಗೂ ಅನ್ವಯಿಸುವಂತೆ, ಆ ಪಾತ್ರ ನಮ್ಮ ನೆರೆಮನೆಯವರೇನೊ ಅನ್ನಿಸುವಂತೆ ಬರೆಯುತ್ತಾರೆ.

* ಗೊರೂರು ಜೀವನ ಸಾಧನೆ ಪು. ಸಂ. ೧೦

ಮನುಷ್ಯ ಜೀವನ ಹಸನಾಗಬೇಕಾದರೆ. ಅಲ್ಲಿ ನೆಮ್ಮದಿ, ಸುಖ, ನೆಲೆಸಿರಬೇಕು. ಹಾಗಾಗಬೇಕಾದರೆ ಪ್ರೀತಿ ವಿಶ್ವಾಸಗಳು ಪರಸ್ಪರರಲ್ಲಿ ಗೌರವ ತುಂಬಿರಬೇಕು. ಇಂತಹವುಗಳ ಮಹತ್ವವನ್ನು ತಿಳಿದಿದ್ದರಿಂದಲೇ ಗೊರೂರರು ಕೆಡುಕುಗಳನ್ನು ಚಿತ್ರಿಸದೆ ಮಾನವೀಯ ಮೌಲ್ಯಗಳನ್ನು ಬಿತ್ತರಿಸುವ ಬದುಕಿನ ಚೆಲುವನ್ನು ನಮ್ಮ ಮುಂದಿಡುತ್ತಾರೆ. ಗೊರೂರರ ಚಿತ್ರಣದಲ್ಲಿ ಬಡತನ, ದಬ್ಬಾಳಿಕೆ, ಹಿಂಸೆ, ಶೋಷಣೆಗಳು ಕಾಣುವುದೇ ಇಲ್ಲ ಎಂಬುದಕ್ಕೆ ಸ್ವತಃ ಗೊರೂರರೇ ಹೇಳಿರುವ ಈ ಮಾತುಗಳು ಉತ್ತರ ನೀಡುತ್ತವೆ. " **ಹಳ್ಳಿಗಳಲ್ಲಿಯ ಘರ್ಷಣೆಯ ಅರಿವು ಇತ್ತು. ಆದರೆ ಈಗಿನವರಂತೆ ಒಂದು ತತ್ವಕ್ಕೆ ಬಿದ್ದು ಅದನ್ನು ಅತಿಶಯ ಮಾಡಲಿಲ್ಲ. ಹಳ್ಳಿಗಳಲ್ಲಿ ಬರೀ ಘರ್ಷಣೆ ಇದ್ದರೆ ಇರಡು ಸಾವಿರ ವರ್ಷಗಳಿಂದ ಅವು ಬದುಕುತ್ತಿರಲಿಲ್ಲ.ಈಗಿನವರಿಗೆ ಹಳ್ಳಿ ಹಾಗೆ ಕಂಡಿದೆ ಅಷ್ಟೆ ಕೆಟ್ಟದ್ದನ್ನು ನೋಡಲಿಲ್ಲ ಅಂತಲ್ಲ ಕೆಟ್ಟದ್ದನ್ನೇ ಹುಡುಕುತ್ತಾ ಹೋಗಲಿಲ್ಲ. ಈಗಿನವರ ಹಳ್ಳಿ ಕ್ಷಯ ರೋಗದ ಆಸ್ಪತ್ರೆ ಇದ್ದ ಹಾಗೆ. ಆದರೆ ಹಳ್ಳಿಗಳ ಬದುಕಿನಲ್ಲಿ ದೇವರಿಗೂ ಶಯನೋತ್ಸವ ಇಟ್ಟಿದ್ದಾರೆ. ದೇವರನ್ನು ಹೀಗೆ ತೋರಿಸುವುದು ಹುರುಕರಿಗೆ ವಿರೋಧ ಹಾನೆ. ಆದರೆ ಸಾಬರ ಹೆಂಗಸರು ಕೂಡ ಇದನ್ನು ಎಂಜಾಯ್ ಮಾಡೋರು, ಏನಯ್ಯ ಇದು ಅಂತ ಕೇಳಿದರೆ, ನಮ್ಮದು ಇಲ್ಲಿ ಯಾವ ಉತ್ಸವನು ಇಲ್ವಲ್ಲ ಅದಕ್ಕೆ ಇರೋದನ್ನೇ ಎಂಜಾಯ್ ಮಾಡ್ತೀನಿ ಅನ್ನೋರು."***

ಹೀಗಾಗಿಯೇ ಗೊರೂರರ ಕೃತಿಗಳು ಜನರ ಮನಸ್ಸಿಗೆ ಹತ್ತಿರವಾಗುತ್ತವೆ. ಅವರ ನಿರೂಪಣಾ ಶೈಲಿ ಕತೆಯನ್ನು ಎಷ್ಟು ಆತ್ಮೀಯವಾಗಿ ವಿವರಿಸುತ್ತದೆ ಎಂಬುದಕ್ಕೆ **'ಬೆಟ್ಟದ ಮನೆಯಲ್ಲಿ'** ಪ್ರಬಂಧವನ್ನು ನೋಡಬಹುದಾಗಿದೆ.

---

* ಗೊರೂರು ಜೀವನ ಸಾಧನೆ – ಪು. ಸಂ. ೬೬

" ಬೆಟ್ಟದ ಮನೆಗೆ ಬರುವ ದಾರಿಯನ್ನು ನಮಗೆ ತಿಸಿಸುವ ರೀತಿ ಹೀಗಿದೆ–" ನಮ್ಮ ಊರಿನ ಬಳಿಗೆ ಬಂದು ನೀವು ಮೋಟಾರ್ ಬಸ್‌ನಿಂದ ಇಳಿದು ಪಶ್ಚಿಮದ ಮಲೆನಾಡಿನ ಕಡೆಗೆ ಮೂಗಿನ ನೇರಕ್ಕೆ ಸೂರ್ಯ ಮುಳುಗುವ ದಿಕ್ಕಿಗೆ ಹೊರಡಬೇಕು. ಏನೋ ಒಂದು ಗಾಡಿರಸ್ತೆ ಇರುವಂತೆ ತೋರಿದರೂ ಅದು ರಸ್ತೆ ಎಂದುಕೊಂಡು ಗಾಡಿಯಲ್ಲಿ ಹೊರಡಬೇಡಿ-----------------------------------------------------------------------ಈ ಬೆಟ್ಟದಿಂದ ಹೊರಟ ಒಂದು ಝರಿ ಈ ಬೆಟ್ಟವನ್ನು ಹೇಗೆ ಹೇಗೋ ಬಳಸಿಕೊಂಡು ಹೇಮಾವತಿಯನ್ನು ಸೇರುತ್ತದೆ. ಬೆಟ್ಟದ ಮೇಲಕ್ಕೆ ಬರಬೇಕಾದರೆ ಈ ಝರಿಯನ್ನು ಅನೇಕ ಸಲ ದಾಟಬೇಕು."*

ಹೀಗೆ ಸಾಗುತ್ತದೆ ಅವರ ನಿರೂಪಣಾ ಶೈಲಿ ಹಾಗೂ ಮಾರ್ಗದರ್ಶನದ ರೀತಿ ಹೀಗೆ ಕತೆ ಬೆಳೆಯುತ್ತಾ ಹೋಗುತ್ತದೆ. ಇವರ ಪ್ರಬಂಧಗಳು ಕಥೆಗಳಿಗೆ ಸಮೀಪವಾಗಿದೆ. ಎರಡರಲ್ಲಿಯೂ ಅವರು ಗ್ರಾಮೀಣ ಜನಜೀವನವನ್ನು ಆಯ್ಕೆ ಮಾಡಿಕೊಂಡಿರುವುದರಿಂದ ಪ್ರಬಂಧ ಮತ್ತು ಕಥೆಗಳಲ್ಲಿನ ಅಂತರ ಬಹಳ ಕಡಿಮೆ ಎನಿಸುತ್ತದೆ. ಈ ಮೇಲಿನ ಅಂಶಗಳನ್ನು ಪರಿಶೀಲಿಸಿದಾಗ ಗೊರೂರರ ಕಥನ ವಿನ್ಯಾಸದ ರೀತಿ ತಿಳಿದುಬರುತ್ತದೆ.

* ಬೆಟ್ಟದ ಮನೆಯಲ್ಲಿ ಇತರ ಪ್ರಭಂದಗಳು ಪು.ಸಂ. ೩.

# ಅಧ್ಯಾಯ -೪
# ಲಲಿತ ಪ್ರಬಂಧಗಳ ಪಾತ್ರಗಳು

ನಾವು ಯಾವುದೇ ಸಾಹಿತ್ಯವನ್ನು ಓದಿದಾಗ ಅಲ್ಲಿಯ ಕೆಲವು ಪಾತ್ರಗಳು ಮನಸ್ಸಿನಲ್ಲಿ ಗಟ್ಟಿಯಾಗಿ ನಿಂತು ಮುದನೀಡುತ್ತವೆ. ಕಥೆಯಿಂದ ಪಾತ್ರಕ್ಕೆ ಪ್ರಾಮುಖ್ಯ ಬಂದಿದೆಯೋ ಅಥವಾ ಪಾತ್ರದಿಂದ ಕಥೆಗೆ ಪಾಮುಖ್ಯ ಬಂದಿದೆಯೋ ಎಂಬುದೇ ಕೆಲವೊಮ್ಮೆ ತಿಳಿಯದಾಗುತ್ತದೆ. ಇಂತಹ ಅನುಭವ ಗೊರೂರ ಪ್ರಬಂಧಗಳನ್ನು ಓದಿದಾಗಲೂ ಉಂಟಾಗುತ್ತದೆ. ಸಾಮಾನ್ಯವಾಗಿ ಇವರ ಪಾತ್ರಗಳು ಯಾವುದೇ ಪವಾಡಗಳನ್ನು ಮಾಡದ ಮಾಮೂಲು ಪಾತ್ರಗಳಾಗಿಯೇ ಕಂಡುಬಂದರು ಅವುಗಳಲ್ಲಿರುವ ಯಾವುದೋ ಸೂಕ್ಷ್ಮ ವೈಶಿಷ್ಟ್ಯತೆ ನಮ್ಮನ್ನು ಆಕರ್ಷಿಸುತ್ತದೆ. " ಗೊರೂರರು ಮುಖ್ಯವಾಗಿ ಕಥಾ ನಿರೂಪಣೆಗೆ ಹೆಚ್ಚು ಒತ್ತುಕೊಡುತ್ತಾರೆಯೇ ವಿನಃ ಪಾತ್ರಗಳ ಘರ್ಷಣೆ, ವೈಯಕ್ತಿಕ ಆಶೋತ್ತರ ಒಳತೋಟಿಗಳಿಗೆ ಹೆಚ್ಚು ಪ್ರಾಧಾನ್ಯ ನೀಡುವುದಿಲ್ಲ. ಅವರು ಕಥೆ ಹೇಳುವ ವಿಧಾನವೂ Folk narrative style ಆಗಿದ್ದು ಓದುಗನನ್ನು ಆಕರ್ಷಿಸುತ್ತದೆ".* ಎಂಬುದಾಗಿ ಡಾ. ಸಿ. ಜಿ. ವೆಂಕಟಯ್ಯನವರು ಅಭಿಪ್ರಾಯ ಪಡುತ್ತಾರೆ.

ಆದರೆ ಗೊರೂರರು ಪಾತ್ರಗಳ ವಿಶೇಷತೆಯನ್ನು ಬಹುಸೂಕ್ಷ್ಮವಾಗಿ ವಿವರಿಸುತ್ತಾರೆ. ಉದಾಹರಣೆಗೆ. ಬೆಸ್ತರ ಕರಿಯ, ತೂರ, ನಾಣಿ ಈ ಪಾತ್ರಗಳನ್ನು ಪರಿಶೀಲಿಸಬಹುದಾಗಿದೆ.

ಬೆಸ್ತರ ಕರಿಯ ಇದು ಕೇವಲ ಪಾತ್ರವಾಗಿ ಕಂಡುಬರದೆ ವ್ಯಕ್ತಿಚಿತ್ರವೆಂಬಂತೆ ಕಾಣುತ್ತದೆ. ಗೊರೂರರು ಕೊಡುವ ವ್ಯಕ್ತಿಯ ಚಿತ್ರ ಈ ರೀತಿಯಾಗಿದೆ. "ಬೆಸ್ತರ ಕರಿಯ ನಿಜವಾಗಿ ಯೋಗಿಯೇ? ಬೆಸ್ತರ ಕರಿಯ ಅಮರ ಲೋಕಕ್ಕೆ ಸೇರಿದವನು. ಅವನಿಗೆ ಬಾಲ್ಯವೂ ಇಲ್ಲ, ಮುಪ್ಪು ಇಲ್ಲ. ಅವನಿಗಿರುವುದು ಯೌವನ ಒಂದೇ...... ಶತ್ರುಗಳೂ ಇಲ್ಲ ಮಿತ್ರರೂ ಇಲ್ಲ ಹಳೆಯ ಹೆಂಡತಿ ಸತ್ತ ದುಃಖವೂ ಇಲ್ಲ. ಹೊಸ ಹೆಂಡತಿ ಬಂದ ಆನಂದವೂ ಇಲ್ಲ ಅವನನ್ನು ಬಯ್ಯುವವರು ಇಲ್ಲ, ಹೊಗಳುವವರು ಇಲ್ಲ. ಅವನ ಕಸುಬೆ ಅವನ ದೇವರು. ದೊರೆಯಲಾರದ ಸುಖವನ್ನು ಅವನು ಹುಡುಕಿಕೊಂಡು ಹೋಗುವವನು ಅಲ್ಲ. ತನ್ನನ್ನು ಹುಡುಕಿಕೊಂಡು ಬಂದ ದುಃಖದಿಂದ ತಪ್ಪಿಸಿಕೊಂಡು ಓಡಿ ಹೋಗುವವನು ಅಲ್ಲ. ಎಲ್ಲಾ ನೀರನ್ನೂ ತನ್ನಲ್ಲಿ ಒಳಗೊಂಡ

* ಡಾ. ಗೊರೂರು ಜೀವನ ಸಾಧನೆ. ಪು. ಸಂ. ೧೦

ಸಮುದ್ರ ಹೇಗೆ ಶಾಂತವಾಗಿರುತ್ತದೋ ಹಾಗೆ ಕರಿಯ ಲೋಕದ ಹೊಡೆತ ಒದೆತಗಳನ್ನೂ ಸಹಿಸಿಕೊಂಡು ಅದಕ್ಕಾಗಿ ಯಾರ ಮೇಲೆಯೂ ಅಸಮಾಧಾನ , ಅಸೂಯೆ ಪಡದೆ ಶಾಂತನಾಗಿರುತ್ತಾನೆ."*

ಕರಿಯ ಎಂಬುದು ಅವನಿಗೆ ಅನ್ವರ್ಥವಾಗಿ ಬಂದ ಹೆಸರಾಗಿರುತ್ತದೆ. ಕರಿಯುನಿಗೆ ಭಯವೆಂಬುದೇ ಇರಲಿಲ್ಲವಂತೆ. ಚಳಿ, ಮಳೆ, ಗಾಳಿ, ಬಿಸಿಲು ಎಲ್ಲ ಕಾಲದಲ್ಲಿಯೂ ಅವನ ಉಡುಪು ಒಂದೇ ಆಗಿರುತ್ತಿತ್ತಂತೆ. " ಕರ್ಮದಲ್ಲಿ ಕುಶಲನಾಗಿರುವುದು ಯೋಗವೆಂದು ಹೇಳುತ್ತಾರೆ. ಆ ದೃಷ್ಟಿಯಿಂದ ನೋಡಿದರೆ ಕರಿಯನ ಕರ್ಮಕುಶಲತೆ ಅನೇಕರಲ್ಲಿಲ್ಲದ ಅಸಾಧಾರಣವಾದ ಶಕ್ತಿ. ಬಾಲ್ಯದಿಂದಲೂ ಹುಡುಗರ ಅಕೃತಿಮವಾದ ಮನಸ್ಸನ್ನೆಳೆದ ಭೀಕರ ಅದ್ಭುತ ವ್ಯಕ್ತಿ. ಅವನ ಅನಾಸಕ್ತಿ ಅದ್ಭುತ, ಅವನ ಮದುವೆಗಳ ಸಬಂಧದಲ್ಲಿ ಅವನು ವ್ಯಕ್ತಪಡಿಸಿದ ಅನಾಸಕ್ತಿ ಎಂತಹ ಯೋಗಿಗಳಲ್ಲಿಯೂ ಕಾಣದ ಶಕ್ತಿ.

ಹೀಗಾಗಿಯೇ, ಬೆಸ್ತರ ಕರಿಯ ಗೊರೂರರಿಗೆ ಯೋಗಿಯಂತೆ ಕಾಣುತ್ತಾನೆ. ಅವನ ಕಾಯಕ ನಿಷ್ಠೆ ದೈವ ಭಕ್ತಿಗಿಂತಲೂ ಮಿಗಿಲಾಗಿ ಕಂಡುಬರುತ್ತದೆ. ಸುಖದಲ್ಲಿ ಹಿಗ್ಗದೆ, ದುಃಖದಲ್ಲಿ ಕುಗ್ಗದೆ, ಕಾಯಕದ ತನ್ಮಯತೆಯಲ್ಲಿಯೇ ಬದುಕನ್ನು ಸಾರ್ಥಕ ಪಡಿಸಿಕೊಂಡ ವ್ಯಕ್ತಿಯಾಗಿ ಕರಿಯ ಮನಸ್ಸಿನಾಳದಲ್ಲಿ ಉಳಿದು ಬಿಡುತ್ತಾನೆ.

ಹೀಗೆಯೆ ಅನ್ವರ್ಥ ನಾಮದ ಮೂಲಕವೇ ಹೆಸರುವಾಸಿಯಾದವನು ತೂರ. ಇವನಿಗೆ ಈ ಹೆಸರು ಬರಲು ಕಾರಣವನ್ನು ಲೇಖಕರು ಹೀಗೆ ತಿಳಿಸಿದ್ದಾರೆ. " ತೂರ ಅಂತಹ ಗಟ್ಟಿಮುಟ್ಟಾದ ಆಳಲ್ಲ, ಅವನು ಹತ್ತು ವರುಷದವರೆಗೆ ಬೆಳೆದವನು ಈಚೆಗೆ ಬೆಳೆಯಲೇ ಇಲ್ಲ. ಅವನ ಬೆಳವಣಿಗೆ ಅಲ್ಲಿಗೆ ಮುಕ್ತಾಯವಾಯಿತು. ಅವನ ಮನಸ್ಸು ಸಹ ಮಗುವಿನ ಸರಳತೆಯನ್ನು ಮೀರಿ ಹುಡುಗರ ಮೊಂಡಾಟ, ಒರಟಾಟದ ಹತ್ತು ಹನ್ನೆರಡು ವಯಸ್ಸಿನವರೆಗೆ ಬೆಳೆದು ಈಚೆಗೆ ನಿಂತು ಹೋಗಿದೆ. ಅವನ ಕೈಕಾಲುಗಳಲ್ಲಿ ಹೆಚ್ಚು ಶಕ್ತಿಯಿಲ್ಲ ಅವನ ತಲೆ ಸಾಧಾರಣವಾಗಿ ಆಚೆ ಈಚೆ ತೂರಾಡುತ್ತಲೇ ಇರುತ್ತದೆ. ಅವನು ಸಡ್ಡಾಳು ಆದುದರಿಂದಲೇ ಅವನಿಗೆ ತೂರನೆಂದು ಹೆಸರು ಬಂದಿರುವುದು." *

* ಬೆಸ್ತರ ಕರಿಯ ಪು. ಸಂ. ೧೦
*ಬೆಸ್ತರ ಕರಿಯ ಪು. ಸಂ. ೩೦

ಹೀಗೆ ಸಡ್ಡಾಳಾದ ತೂರನನ್ನು ಊರಲ್ಲಿ ಯಾರೂ ಜೀತಕ್ಕೆ ಇರಿಸಿಕೊಳ್ಳುವುದಿಲ್ಲ. ಆದರೆ ಲೇಖಕರೇ ತೂರನನ್ನು ಆಳಾಗಿ ಇಟ್ಟುಕೊಳ್ಳುತ್ತಾರೆ. ಇವರ ಮನೆಯ ಎರಡು ದನಗಳನ್ನು ಕಾಯುವುದರ ಜೊತೆಗೆ ಊರಿನ ಇತರ ಮನೆಯವರೂ ತಮ್ಮ ಮನೆಯ ದನಗಳನ್ನು ಇವನ ಜೊತೆಯೇ ಓಡಿಸುತ್ತಾರೆ. ಆದರೆ ದನಗಳ ಯಜಮಾನರು ಹೇಳುವ ಮಾತು " ಮಹಾ ಇವ ಮಾಡೋದೇನು? ಇವನ ಕೈಲಿ ಒಂದು ಕರು ತಡೆಯೋಕೆ ಆಗ್ತದೈ ?..... ದನಗಳು ಪಾಡಿಗೆ ದನ ಹೊಗ್ತದೆ ಬರ್ತದೆ." ಎನ್ನುತ್ತಾರೆ. ಆದರೆ ಈ ಮಧ್ಯೆ ತೂರನಿಗೆ ಜ್ವರ, ಪ್ಲೇಗ್, ಗಡ್ಡೆ ಸಹ ಇದೆ ಎಂಬುದು ತಿಳಿಯುತ್ತದೆ. ಅನಂತರ ಆರಂಭವಾಗುತ್ತದೆ ಅವಾಂತರ " ಮೊದಲ ದಿನ ಹಾಗು ಹೀಗೂ ಕಳೆದು ಹೋಯಿತು. ಆ ರಾತ್ರಿ ಪೂರೋಹಿತರ ಮನೆಯ ದನಗಳು ಹಾಲು ಕರೆಯಲಿಲ್ಲ ಶಾಮಚಾರ‍್ರು ಎಮ್ಮೆ ಸೊರು ಬಿಡಲಿಲ್ಲ. ಕಾವೇರಮ್ಮನವರ ಹಸು ಒದ್ದೇ ಬಿಟ್ಟಿತು. ಗೊಗ್ಗಯ್ಯನವರ ಕರುಗಳೆಲ್ಲಾ ಯಾವ ಮಾಯದಲ್ಲಿಯೋ ಹಸುಗಳ ಹಾಲುಕುಡಿದು ಬಿಟ್ಟವು. ಮೂರ್ತಿ ಮನೆಯ ದನಗಳು ಗೊಂತಿನಿಂದ ಕಿತ್ತುಕೊಂಡು ಹೋಗಿ ಮಾಯ್ಗನ ಹೊಲ ಮೇದುಬಿಟ್ಟವು. ಮಾಯಿಗ ದನಗಳನ್ನು ಹೊಡೆದುಕೊಂಡು ಬಂದು ಮೂರ್ತಿ ಮನೆಯ ಮುಂದೆ ದೊಡ್ಡ ಪಂಚಾಯ್ತಿ ಹೂಡಿದ ನರಸಿಂಹ ಮೂರ್ತಿಯ ಇಪ್ಪತ್ತು ದನಗಳನ್ನೂ ಲಚಮ ದೊಡ್ಡಿಗೆ ಕೂಡಿದ. ಎಲ್ಲಿ ಯಾವ ಮನೆ ಬಾಗಿಲಿನಲ್ಲಿ ನಾಲ್ಕು ಜನ ಸೇರಿದ ಕಡೆ, ಇಸ್ಪೀಟು ಕಛೇರಿಯಲ್ಲಿ, ಎಲ್ಲಿ ನೋಡಿದರೂ ತೂರನ ಬೈಗುಳೇ ಆಯಿತು. ನಮ್ಮವರು ಆಗ ತೂರನ ಜಪ ಮಾಡಿದಷ್ಟು ಯಾವ ದೇವರ ಜಪವನ್ನು ಮಾಡಿರಲಾರರು."*

ಹೀಗೆ ಸಡ್ಡಾಳಾದ ತೂರ ಇಡೀ ಊರಿನಲ್ಲಿಯೇ ಹೊಸಗಾಳಿ ಎಬ್ಬಿಸಿದ್ದು. ಆ ಮೂಲಕ ತೂರನಿಗೂ ಒಂದು ವ್ಯಕ್ತಿತ್ವವಿದೆ. ಸ್ಥಾನವಿದೆ ಎಂಬುದನ್ನು ಕಂಡುಕೊಳ್ಳಲು ಸಹಾಯಕವಾಗುತ್ತದೆ. ವ್ಯಕ್ತಿ ಸಡ್ಡಾಳೆ ಆಗಿರಲಿ ಧೃಢಕಾಯನೆ ಆಗಿರಲಿ ಅವನಿಗೂ ತನ್ನದೇ ಆದ ವಿಶೇಷತೆಗಳಿರುತ್ತವೆ. ಎಂಬುದನ್ನೂ ಅಂತಹವರ ಮೇಲೂ ಎಷ್ಟು ಜನ ಅವಲಂಭಿತರಾಗಿತ್ತಾರೆ, ಹಾಗೆಯೇ ವ್ಯಕ್ತಿ ನಮ್ಮಿಂದ ದೂರವಿರುವಾಗ ಮಾತ್ರ ಅವರ ಬೆಲೆ ಏನು ಎಂಬುದು ಅರ್ಥವಾಗುತ್ತದೆ. ತೂರನು ಕರಿಯನಂತೆಯೇ ಯಾವಾಗಲೂ ಕುಗ್ಗದ, ಹಿಗ್ಗದ ವ್ಯಕ್ತಿಯಾಗಿಯೇ ಕಂಡುಬರುತ್ತಾನೆ.

---

*ಬೆಸ್ತರ ಕರಿಯ ಪು. ಸಂ. ೩೦

ತೂರ ಮತ್ತು ಕರಿಯರಂತೆಯೇ ನಾಣಿಯ ಪಾತ್ರವು ಸಹ ಪ್ರಮುಖವಾದುದು. ನಾರಾಣಯ್ಯಂಗಾರ್ ಎಂಬುದು ನಾಣಿಯ ಪೂರ್ಣವಾದ ಹೆಸರು ಅವನು ಇಪ್ಪತ್ತೆರಡನೆಯ ವಯಸ್ಸಿನಲ್ಲಿಯೇ ಮದುವೆಯಾಗಿ ವಿಧುರನಾದವನು. ಎಲ್ಲರೂ ಅವನನ್ನು ನಾಣಿ ಎಂಬುದುದಾಗಿಯೇ ಕರೆಯುತ್ತಾರೆ. ಅವನ ರೂಪು ಲಕ್ಷಣ ಹೀಗಿದೆ ಮುಖ ಲಕ್ಷಣವಾಗಿ ದಪ್ಪವಾಗಿದೆ. ಮೂಗು ಗಿಣಿಯ ಕೊಕ್ಕಿನಂತೆ ಸ್ವಲ್ಪ ಬಾಗಿದೆ. ಕಣ್ಣು ಹೊಳಪಾಗಿಯೂ ತೀಕ್ಷ್ಣವಾಗಿಯೂ ಇರುವುದಲ್ಲದೆ ವಿನೋದವೂ ಕುಚೇಷ್ಟೆಯು ಅದರಲ್ಲಿ ತುಂಬಿದೆ ಅವನೆಲ್ಲಿದ್ದರೆ ಅಲ್ಲಿ ನಗು ಗದ್ದಲ, ಈತ ಬಹಳ ವಿನೋದಪ್ರಿಯ ಹಾಗೆಯೆ ಪಾದರಸದಂತೆ ಚಟುವಟಿಕೆಯಾದ ವ್ಯಕ್ತಿ. ಸಮಯಕ್ಕೂ ಸ್ಥಳಕ್ಕೂ ತಕ್ಕಂತೆ ತನ್ನ ನಡತೆಯನ್ನು ಮಾತನ್ನು ಬದಲಾಯಿಸಿಕೊಂಡು ಎಲ್ಲರಿಗೂ ಸ್ನೇಹಿತನಾಗಿರುವ ಶಕ್ತಿ ಅವನಿಗಿದೆ. ಇದ್ದುದರಲ್ಲಿಯೆ ತೃಪ್ತನಾಗಿರುವುದು ಅವನ ಸ್ವಭಾವ ಹೀಗಿರುವ ಈ ನಾಣಿಯು ಆ ಊರಿಗೆ ಒಬ್ಬ ಆಶುಕವಿಯಿದ್ದಂತೆ " ನಾಣಿಯು ಯಾವಾಗ ಮಾತನಾಡಬೇಕಾದರೂ ಅಂತ್ಯ ಪ್ರಾಸವಿಲ್ಲದೆ ಮಾತನಾಡುವುದೇ ಇಲ್ಲ. ಅವನಿಗೆ ಒಂದು ಪದವನ್ನು ಹೇಳಿದರೆ ಅವನು ಅದೇ ರೀತಿಯ ಮೂವತ್ತು ಪದಗಳನ್ನು ಹೇಳುತ್ತಾನೆ. ಅವನ ಆ ಪ್ರಾಸಿಕೆ ಎಷ್ಟು ಅರ್ಥವತ್ತಾಗಿರುತ್ತಿತ್ತು ಎಂಬುದಕ್ಕೆ ಈ ಮುಂದಿನ ಸಾಲುಗಳನ್ನು ಗಮನಿಸಬಹುದು.

" ಒಮ್ಮೆ ಯಾರೋ ಎಲ್ಲಿಗೋ ಹೋದರು ಎಂಬ ಮಾತು ಬಂದ ಕೂಡಲೆ ನಾಣಿಯು–

ಅವರು ಹೋಗ್ದೆ ಇದ್ರೆ ಕಷ್ಟ

ಆಗ ದೇಶಕ್ಕೆ ನಷ್ಟ

ನಮಗೆಲ್ಲಾ ಜಾತಿ ಭ್ರಷ್ಟ

ನಾವ್ಹೇಳೋ ಮಾತೆಲ್ಲ ಸ್ಪಷ್ಟ.

ಇನ್ನೊಂದು ಸಲ

ಅವರ್ಗೆ ಸುಖ
ನಮ್ಗೆ ದುಃಖ
ಉರಿಯುತ್ತೆ ಮುಖ
ಕೇಳೋನಿಲ್ಲ ಸಖ.

ಯಾರಿಗೊ ಮದುವೆಯಾಗುತ್ತೆ ಎಂದ ಕೂಡಲೆ ನಾಣಿ

ಅವನ್ಗೆ ಇಲ್ಲ ಲಗ್ನ
ಮನೆಗೆ ಬಂದಿಲ್ಲ ಹೆಗ್ಣ(ಹೆಂಡತಿ)
ಇರೋದೆಲ್ಲ ಆಮೇಲೆ ಭಗ್ನ
ಮೈಯೆಲ್ಲಾ ಬರಿ ನಗ್ನ (ಸಾಲ) "*

ಮೇಲ್ನೋಟಕ್ಕೆ ಹಾಸ್ಯ ಚಟಾಕೆಯಂತೆ ಈ ಸಾಲುಗಳು ಕಂಡುಬಂದರೂ ಇವು ಅರ್ಥವತ್ತಾದ ಅನುಭವದ ಮಾತುಗಳಂತೆ ಕಂಡುಬರುತ್ತವೆ.

ಹೀಗೆ ನಾಣಿಯು ತಾನು ಇರುವ ಕಡೆಯಲ್ಲೆಲ್ಲಾ ನಗುವಿನ ಗದ್ದಲವನ್ನು ಮೂಡಿಸುತ್ತಾ. ಸಮಯ, ಸ್ಥಳಕ್ಕೆ ತಕ್ಕಂತೆ ನಡೆ–ನುಡಿಗಳನ್ನು ಬದಲಾಯಿಸಿಕೊಂಡು, ಎಲ್ಲರಿಗೂ ಸಹಾಯ ಮಾಡುತ್ತಾ " ಇವನೇ ವಿದ್ಯಾವಾಚಸ್ಪತಿ" ಎನಿಸಿಕೊಂಡು ಪ್ರಸಿದ್ಧನಾಗುತ್ತಾನೆ. ಹಾಗೆಯೇ ನಮ್ಮ ಮುಖದಲ್ಲೂ ಒಂದು ನಗುವಿನ ಅಲೆಯನ್ನು ತೇಲಿಸಿಬಿಡುತ್ತಾನೆ.

ಗೊರೂರರ ಪಾತ್ರಗಳ ಒಳತೋಟಿಗೆ ಹೆಚ್ಚು ಪ್ರಾಧಾನ್ಯ ನೀಡುವುದಿಲ್ಲ ಎಂಬ ಹೇಳಿಕೆಯೊಂದಿದೆ ಆದರೆ ಈ ಹೇಳಿಕೆಗೆ ಅಪವಾದವೆಂಬಂತೆ ಕಮಲಮ್ಮನ ಪಾತ್ರ ಮೂಡಿಬಂದಿದೆ. " ಕಮಲಮ್ಮ ವಿಧವೆ. ಹತ್ತನೆಯ ವರ್ಷ ವಿವಾಹವಾಗಿ ಆದ ಐದು ತಿಂಗಳಿಗೆ ಗಂಡ ತೀರಿಹೋದನಂತೆ. ಗಂಡನು ಸತ್ತ ಒಂದು ವರ್ಷದೊಳಗೆ ತಂದೆಯು ಸ್ವರ್ಗಸ್ಥನಾದನಂತೆ. ಕಮಲಮ್ಮನ ತಾಯಿಯು ಅವಳ ಬಾಲ್ಯದಲ್ಲಿಯೇ ಸ್ವರ್ಗಸ್ಥಳಾದುದರಿಂದ, ಕಮಲಮ್ಮ ಹತ್ತನೆಯ ವರ್ಷದಲ್ಲಿ ಅನಾಥೆಯಾದಳು. ಅಕ್ಕಿ ಬೀಸುವುದು, ಪಾತ್ರೆ ಉಜ್ಜುವುದು, ಮೆಣಸಿನ ಪುಡಿ ಮಾಡುವುದು ಮುಂತಾದ ಕೂಲಿ ಕೆಲಸಗಳಿಂದ ತಿಂಗಳಿಗೆ ಎರಡು ಮೂರು ರೂಪಾಯಿ ಸಂಪಾದಿಸಿ ಅದರಿಂದ ಜೀವನ– ಮಾಡುತ್ತಿದ್ದಳು---------------------- ಪ್ರಪಂಚದಲ್ಲಿ ಅವಳಿಗೆ ಬೇಸರಿಕೆಯಾಗಲಿ ಉತ್ಸಾಹವಾಗಲಿ ಇರಲಿಲ್ಲ ಅವಳು ಒಂದು ದಿವಸವೂಅತ್ತುದನ್ನೂ ಕಾಣೆ, ನಕ್ಕುದನ್ನೂ ಕಾಣೆ, ಬೈದುದನ್ನೂ ಕಾಣೆ, ಅವಳನ್ನು ಕಂಡರೆ ಊರಿನವರಿಗೆಲ್ಲ ಒಂದು ವಿಧವಾದ ಗೌರವ."*

* ನಮ್ಮ ಊರಿನ ರಸಿಕರು ಪು. ಸಂ. ೪೮
* ನಮ್ಮ ಊರಿನ ರಸಿಕರು ಪು. ಸಂ. ೯೪

ಹೀಗಿದ್ದ ಕಮಲಮ್ಮ ತನ್ನ ಮನಸ್ಸಿನ ಒಳತೋಟಿಯನ್ನು ಸೀತೆಯ ಹತ್ತಿರ ತೋಡಿ ಕೊಳ್ಳುವುದು ಹೀಗೆ. " ಸೀತೆ ನನಗೆ ಬಾಲ್ಯದಿಂದಲು ಚೆನ್ನಾಗಿ ಸಂಸಾರ ಮಾಡಬೇಕೆಂಬ ಆಸೆಯಿತ್ತು. ಚೆನ್ನಾಗಿ ಸಂಸಾರ ಮಾಡಬಲ್ಲೆನೆಂಬ ನಂಬಿಕೆಯೂ ಇತ್ತು. ನನಗೆ ಒಂಭತ್ತು ವರ್ಷವಾಗಿರುವಾಗಲೇ ಜತೆಯ ಹುಡುಗಿಯರೆಲ್ಲ– ' ಇವಳಿಗೇನು ಒಂದು ಮನೆಯ ಕೆಲಸವನ್ನೆಲ್ಲಾ ಒಬ್ಬಳೇ ನಿರ್ವಹಿಸುತ್ತಾಳೆ." ಎನ್ನುತ್ತಿದ್ದರು. ಮಕ್ಕಳನ್ನು ಕಂಡರೆ ನನಗೆ ಪ್ರಾಣ. ಬೀದೀಲಿ ನಾನು ಸ್ಕೂಲಿಗೆ ಹೊಗ್ತಾ ಇದ್ದಾಗ ಮಕ್ಕಳು ನನ್ನ ಕಡೆಗೆ ಧುಮುಕುತ್ತಿದ್ದವು. ಅನಂತರ ಮದುವೆಯಾಗಿ ಅವರು.......... ಅದಾದ ಮೇಲೆ ಮಕ್ಕಳು ನನ್ನ ಬಳಿಗೆ ಯಾಕೋ ಬರುವಂತೆಯೇ ಕಾಣುವುದಿಲ್ಲ. ಅವುಗಳನ್ನು ಸಮಾಧಾನ ಪಡಿಸುವುದಕ್ಕೆ ಈಗ ನನಗೇಕೋ ಬರುವುದಿಲ್ಲವೆಂದು ಕಾಣುತ್ತೆ. ನನಗಂತೂ ಮಕ್ಕಳನ್ನು ಕಂಡರೆ ಈಗ ಆಗ ಇದ್ದುದಕ್ಕಿಂತ ಪ್ರೀತಿ ಹೆಚ್ಚು ತಾಯಿಯ ಸೊಂಟದಲ್ಲಿ ಮಗುವನ್ನು ನೋಡಿದ ಕೂಡಲೇ ನನ್ನ ಹೃದಯದಲ್ಲಿ ಯಾವುದೋ ಒಂದು ವಿಧವಾದ ಆಸೆಯುಂಟಾಗುತ್ತದೆ.------------------------------ ಸೀತೆ, ನಾನು ಅನೇಕ ವೇಳೆ ನನಗೆ ಒಂದು ಮಗುವಿರುವಂತೆ ಕನಸು ಕಾಣುತ್ತೇನೆ. ಕೃಷ್ಣನಂತಹ ಎರಡು ವರ್ಷದ ಹುಡುಗ ಅವನು ದೊಡ್ಡವನೂ ಆಗುವುದಿಲ್ಲ, ಚಿಕ್ಕವನೂ ಆಗುವುದಿಲ್ಲ. ಯಾವಾಗಲೂ ಒಂದೇ ಸಮನಾಗಿರುತ್ತಾನೆ. ನನಗೆ ಹೆಚ್ಚು ದುಃಖ ವಾಗಲಿ , ಸುಖವಾಗಲಿ ಉಂಟಾದಾಗ ಅವನು ನನ್ನ ಬಳಿಗೆ ಬಂದು ತನ್ನ ಕೋಮಲವಾದ ತೋಳುಗಳನ್ನು ನನ್ನ ಕತ್ತಿಗೆ ಹಾಕಿ ನೇತುಬಿದ್ದು ಕೊಳ್ಳುತ್ತಾನೆ. ನೆನ್ನೆಯ ರಾತ್ರಿಯು ನಾನು ಪಾರ್ವತಮ್ಮನವರ ಮೊಮ್ಮಗಳಿಗೆ ಹೊಲಿದುಕೊಟ್ಟ ಚಂಡಿನ ವಿಷಯ ಯೋಚಿಸುತ್ತಿದ್ದೆ. ಅದಕ್ಕೆ ಅಂತ ಕಾಣುತ್ತೆ, ನನ್ನ ಕೃಷ್ಣನು ಬಂದು ನನ್ನ ತುಟಿಯ ಮೇಲೆ ತನ್ನ ತುಟಿಯನ್ನು ಇಟ್ಟು ಮುತ್ತು ಕೊಟ್ಟ - ಹೂ, ಮಕ್ಕಳು ತಾಯಂದಿರಿಗೆ ಕೊಡುವಂತೆಯೇ ಕೊಟ್ಟ ಹೋಗಲಿ ಬಿಡು. ಸೀತಾ ಇದೆಲ್ಲ ಬರಿಯ ಕನಸು ನಿಶ್ಚಯ ವೆಂದು ತಿಳಿಯ ಬೇಡ ನನಗೆ ಅರುಳು ಮರುಳು ಏನು ಹೇಳುತ್ತೇನೋ ಅದರ ಜ್ಞಾನವೇ ಇಲ್ಲ"*

* ನಮ್ಮ ಊರಿನ ರಸಿಕರು ಪುಟ ಸಂಖ್ಯೆ : ೧೧೪

ಇದನ್ನು ನೋಡಿದಾಗ ಕಮಲಮ್ಮನ ಮನದಾಳದ ನೋವು ಏನೆಂಬುದು ಓದುಗರಿಗೆ ತಿಳಿಯುತ್ತದೆ. ಗೊರೂರು ಪಾತ್ರಗಳ ಒಳಮನಸ್ಸನ್ನು ಅರಿಯಬಲ್ಲವರಾಗಿದ್ದರು ಎಂಬುದು ಅರ್ಥವಾಗುತ್ತದೆ.

' ನಮ್ಮ ಊರಿನ ರಸಿಕರು' ಹಾಸ್ಯ ಪ್ರಧಾನ ಕೃತಿಯಾಗಿರುವಂತೆಯೆ ಪಾತ್ರ ಪ್ರದಾನವಾದ ಕೃತಿಯು ಹೌದು. ಈ ಕೃತಿಯಲ್ಲಿ ಅನೇಕ ಪಾತ್ರಗಳ ಪರಿಚಯ ನಮಗಾಗುತ್ತದೆ. ಹಲವಾರು ಪ್ರಬಂಧಗಳಲ್ಲಿ ಲೇಖಕರೇ ಪಾತ್ರವಾಗಿ ಕಾಣಿಸಿಕೊಳ್ಳುತ್ತಾರೆ, ಅಭಿಪ್ರಾಯ ಸೂಚಿಸುತ್ತಾರೆ, ನಿರೂಪಕರಾಗಿ ಕಾಣಿಸಿಕೊಳ್ಳುತ್ತಾರೆ.

ಪಾಣಿನಿ - ರಂಗೇಗೌಢ, ಶಾಲುಸಾಬಿ , ಸತಾನಿ ನಾರಾಯಣಯ್ಯ , ಶೀನಪ್ಪ , ಕೃಷ್ಣಯ್ಯಂಗಾರರು, ಕಿಟ್ಟು , ಗುಂಡ ಕಮಲಮ್ಮ ಮುಂತಾದವು ಪ್ರಮುಖ ಪಾತ್ರಗಳಾಗಿ ಕಂಡುಬರುತ್ತವೆ.

ಕರಿಯನಂತೆ ಕಾಯಕದಲ್ಲಿ ಯೋಗಿಯಾಗಿ ಕಂಡುಬರುವ ಮತ್ತೊಂದು ಪಾತ್ರವೆಂದರೆ ವೆಂಕಟರಾಯರದು, ವೆಂಕಟರಾಯರು ನಿವೃತ್ತಿಯ ನಂತರ ಮಲ್ಲಿಗೆ ಹಳ್ಳಿಗೆ ಬಂದು ನೆಲೆಸುತ್ತಾರೆ. ಕೃಷಿಕಾಯಕವನ್ನು ಆರಂಭಿಸುತ್ತಾರೆ. ಅವರು ಆ ಕೆಲಸದಲ್ಲಿಯೇ ದೇವರನ್ನು ಕಂಡುಕೊಳ್ಳುತ್ತಾರೆ. ಅನಂತರದಲ್ಲಿ ಅವರ ಜೀವನ ದೃಷ್ಟಿ ಹೇಗೆ ಬದಲಾಗುತ್ತದೆ. ಎಂಬುದನ್ನು ಲೇಖಕರು ಹೀಗೆ ಚಿತ್ರಿಸುತ್ತಾರೆ.

" ಸ್ವತಃ ವೆಂಕಟರಾಯರೇ ಸರ್ಕಾರಿ ಉದ್ಯೋಗದಲ್ಲಿರುವಾಗ ನಿತ್ಯ " ಈ ನೀಚ ಸೇವನೆಯು ಅಪೇಯ ಪಾನವು ಅಭಕ್ಷ್ಯ ಭೋಜನವು (ಹೋಟೆಲ್) ಇನ್ನು ಸಾಕು : ನಿವೃತ್ತನಾದ ಕೂಡಲೇ ಇನ್ನೂ ಹೆಚ್ಚು ಆಚಾರ ಶೀಲನಾಗಿರೋಣ" ಎಂದು ಹೇಳುತ್ತಿದ್ದರು. ಆದರೆ ಅವರು ಮಲ್ಲಿಗೆ ಹಳ್ಳಿಗೆ ಬಂದ ಮೇಲೆ ವ್ಯವಸಾಯವೆಂಬ ದೇವರು ಅವರನ್ನು ಆಕರ್ಷಿಸಿದ ಕೂಡಲೇ ಆ ಹಿಂದಲ

ಹಳೆಯ ದೇವರನ್ನು ಅವರೇ ಕೈಬಿಟ್ಟರು. ಆದರೆ ಅವರು ದೇವರನ್ನೂ ಕಾಯಕವನ್ನು ಒಂದಾಗಿ ಮಾಡಿಕೊಂಡಿದ್ದುದರಿಂದ ತಾನು ಉದ್ದಕ್ಕೂ ಭಗವದ್ಧ್ಯಾನದಲ್ಲಿಯೇ ಭಗವತ್ ಕೈಂಕರ್ಯದಲ್ಲಿಯೇ ಇರುವುದು ಅವರಿಗೆ ಅನುಭವವಾಗುತ್ತಿದ್ದಿತ್ತು. ನದಿಯ ಈಚೆಯ ದಡದ ನರಸಿಂಹ ಸ್ವಾಮಿ ದೇವಸ್ಥಾನದ ತೀರದಲ್ಲಿಯೇ ಆಚೆಯ ದಡದಲ್ಲಿ ಅವರ ಜಮೀನುಇತ್ತು. ದರ್ನುಮಾಸದ ದಿನಗಳಲ್ಲಿ ದೇವಾಲಯದಲ್ಲಿ ಬೆಳಗಿನ ಜಾವದ ಘಂಟೆಯ ಸದ್ದು ಕೇಳಿದ ಕೂಡಲೇ ಅವರು ಹಾಸಿಗೆಯಿಂದ ಎದ್ದು ಇತರರು ನದಿಗೆ ಸ್ನಾನಕ್ಕೆ ಹೋಗುವಂತೆ ತಾವು ತಮ್ಮ ಜಮೀನಿಗೆ ಹೋಗುತ್ತಿದ್ದರು"*

ವೆಂಕಟರಾಯರ ಕಾಯಕ ನಿಷ್ಠೆ ಯಾವ ರೀತಿಯಾಗಿತ್ತು ಎಂದರೆ " ಕೆಲವರು ಹಾಸಿಗೆಯಿಂದ ಎದ್ದ ಕೂಡಲೆ ದೇವರನ್ನು ಧ್ಯಾನಿಸುವಂತೆ ವೆಂಕಟರಾಯರು ಎದ್ದಕೂಲಡಲೇ ತೋಟದಲ್ಲಿ ಏನುಕೆಲಸ ಎಂದು ಯೋಚಿಸುತ್ತಿದ್ದರು" ಇಂತಹ ಕಾಯಕ ನಿಷ್ಟೆಯ ಫಲವಾಗಿಯೇ " ಮರದ ಮೇಲೆಯೇ ಹಣ್ಣಾಗಿ ಕೆಲವು ಹಣ್ಣುಗಳು ಬಿರಿದಿದ್ದ ರಸಬಾಳೆಗೊನೆಯಲ್ಲಿಯೇ ಭಗವಂತ ಪ್ರತ್ಯಕ್ಷನಾದಂತೆ ಅವರ ಮನಸ್ಸು ಧ್ಯಾನ ಪರವಾಗುತ್ತಿತ್ತು "

ಆದ್ದರಿಂದಲೇ " ಜಮೀನಿಗೆ ಹೋಗಿ ನೇಗಿಲನ್ನು ಹೂಡಿದಕೂಡಲೇ ವೆಂಕಟರಾಯರು ನೀರಿಗೆ ಬಿದ್ದ ಮೀನಿನಂತೆ ಗೆಲುವಾಗುವರು. ------------------------------------------------------------ ---------------------------------------------------------------------------------- ಮಳೆಯಿಂದ ತೋಯ್ದ ನೆಲ ಶುಭ್ರವಾಗಿ , ಗೆಲುವಾಗಿ , ಸ್ವಚ್ಛವಾಗಿ, ಸುಗಂಧಯುಕ್ತವಾಗಿ , ಆಗತಾನೇ ಸ್ನಾನಮಾಡಿದ ಸುಂದರಿಯಂತೆ ಕಣ್ಣಿಗೆ ಸಂಪಾಗಿತ್ತು. ಬಿಸಿಲು ಏರುತ್ತಾ, ಏರುತ್ತಾ. ಭೂಮಿ ಗಳಿಗೆ ಗಳಿಗೆಗೂ ಹೊಸ ಹೊಸ ರೂಪದಿಂದ ರಮಣೀಯವಾಗುತ್ತಿದ್ದಿತ್ತು. ಉಳುವುದರಿಂದ ಶ್ರಮವಾಗುವುದರ ಬದಲು ವೆಂಕಟರಾಯರಿಗೆ ಅದೇ ಒಂದು ಕೇಳಿಯಾಯಿತು. --------------------------------ಇಂದು ಅವರಿಗೆ ತಮ್ಮ ಭೂಮಿ ಭಗವಂತನ ಪ್ರತಿ ರೂಪವಾಗಿಯೇ ಕಂಡಿತು. ಅವರಿಗೆ ದೇವರ ಪೂಜೆ ಮಾಡಿದ ಭಾವ ಉಂಟಾಯಿತು"

* ಬೆಟ್ಟದ ಮನೆಯಲ್ಲಿ ಮತ್ತು ಇತರ ಪ್ರಭಂದಗಳು ಪುಟ ಸಂಖ್ಯೆ : ೧೧೫

ವೆಂಕಟರಾಯರ ಹೆಂಡತಿ ತಮ್ಮ ಕಾಯಕಕ್ಕೆ ಅಡ್ಡಿಪಡಿಸುತ್ತಿದ್ದುದರಿಂದ ಅವರ ಒತ್ತಾಯಕ್ಕೆ ಮಣಿದು ಅವರು ಕೃಷಿ ಕಾರ್ಯವನ್ನು ಬಿಟ್ಟದ್ದರಿಂದ ಇಡೀ ಹಳ್ಳಿಯೇ ಸೌಲಭ್ಯವಂಚಿತವಾಗುತ್ತದೆ. " ನೋಡಿ ಹೋದವರ್ಷ ನಿಮ್ಮ ಜಮೀನನ್ನು ನೀವು ಮಾಡಿದ್ದಿರಿ , ಈ ವರ್ಷಬರಿಯ ದೇವರೇ ಮಾಡಿದದ್ದಾನೆ ನೋಡಿ. ಪಾಳುಬಿದ್ದು ಗೋಳುಸುರಿಯುತ್ತಿದೆ"* ಎಂಬುದಾಗಿ ಅರ್ಚಕರು ಹೇಳಿದಾಗ ವೆಂಕಟರಾಯರು ಎಚ್ಚೆತ್ತು ಪಶ್ಚಾತಾಪ ಪಟ್ಟು ಮತ್ತೆ ಕರ್ತವ್ಯದ ಕಡೆಗೆ ತಿರುಗುತ್ತಾರೆ. ಹೀಗೆ ಜೀವನವನ್ನು ಸಫಲಗೊಳಿಸಿಕೊಂಡ ಕಾಯಕ ಯೋಗಿಯಾಗಿ ವೆಂಕಟರಾಯರು ನೆನಪಿನ ಆಳದಲ್ಲಿ ಉಳಿದುಬಿಡುತ್ತಾರೆ.

*ಬಿಟ್ಟದ ಮನೆಯಲ್ಲಿ ಮತ್ತು ಇತರ ಪ್ರಭಂದಗಳು ಪುಟ ಸಂಖ್ಯೆ ೧೧೯.೧೨೧

# ಅಧ್ಯಾಯ -೫

## ಅಭಿವ್ಯಕ್ತಿ ಭಾಷೆ ಶೈಲಿ

ಯಾವುದೇ ಒಬ್ಬ ಲೇಖಕನ ಬರಹ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುವಲ್ಲಿ ಭಾಷೆ , ಶೈಲಿ, ಅಭಿವ್ಯಕ್ತಿಗಳು ನಿರ್ಣಾಯಕ ಅಂಶಗಳಾಗಿರುತ್ತವೆ. ಇವುಗಳು ಉತ್ತಮವಾಗಿ ಬರಹದೊಡನೆ ಹೆಣೆದು ಕೊಂಡಿದ್ದಾಗ ಆ ಸಾಹಿತ್ಯಕ್ಕೆ ತನ್ನದೇ ಆದ ವೈಶಿಷ್ಯತೆ ಕೂಡಿಬರುತ್ತದೆ.

ಭಾಷೆಯ ಬಗೆಗೆ ಗೊರೂರರಿಗೆ ವಿಶೇಷವಾದ ಅಭಿಮಾನವಿತ್ತು ಅದನ್ನು ಅವರು ಹೀಗೆ ವ್ಯಕ್ತಪಡಿಸಿದ್ದಾರೆ. ಭಾಷೆ ಎಂಬುದೇ ಅದ್ಭುತ ವಸ್ತು ಅದರಲ್ಲಿಯೂ ಕನ್ನಡ ಪರಮಾದ್ಭುತ ಇಂತಹ ಅದ್ಭುತವಾದ ಭಾಷೆಯನ್ನು ವಚನಕಾರರಂತೆ ಸರಳ ಸುಂದರವಾಗಿ ಬಳಸಿಕೊಂಡರು ಜನರ ಬದುಕಿನ ಹುಳುಕುಗಳನ್ನು ಜನ ಭಾಷೆಯ ಮೂಲಕವೇ ಇದ್ದುದನ್ನು ಇದ್ದ ಹಾಗೆಯೇ ಬಿಚ್ಚಿ ತೋರಿಸುವ , ಹೇಳುವ ವೈಶಿಷ್ಟತೆಗಳನ್ನು ಮೈಗೂಡಿಸಿಕೊಂಡಿದ್ದರು.

ಅವರ ಬಹುಪಾಲು ಕೃತಿಗಳು ಸರಳ - ಭಾಷೆಯನ್ನು ಸಮರ್ಥವಾಗಿ ಮೈಗೂಡಿಸಿಕೊಂಡಿವೆ. ಸರಳ ಭಾಷೆಯ ಮೂಲಕವೇ ಸಂದರ್ಭೋಚಿತವಾದ ಪರಿಸರವನ್ನು ಕಟ್ಟಿಕೊಡುತ್ತವೆ ನೇರ ನುಡಿಯಲ್ಲಿ ಅವರಲ್ಲಿದ್ದಂತಹ ಸಾಮಾಜಿಕ ಕಳಕಳಿ ಮಾನವೀಯ ಮೌಲ್ಯಗಳು ಎದ್ದು ಕಾಣುತ್ತವೆ.

ಗೊರೂರರ ಕೃತಿಗಳಲ್ಲಿ ಕಂಡುಬರುವ ಗ್ರಾಮೀಣ ಜೀವನದ ಅನುಭವಗಳು ಸಹಜವಾದ ಶೈಲಿಯಲ್ಲಿ ಅಭಿವ್ಯಕ್ತಗೊಂಡಿವೆ. ನೇರವಾದ ಅಭಿವ್ಯಕ್ತಿಯೇ ಗೊರುರರ ಬರಹದ ಶೈಲಿಯಾಗಿದೆ. **ಗರಡ ಗಂಬದ ದಾಸಯ್ಯ' 'ಆಚಾರ ಕೆಟ್ಟರೂ ಆಕಾರ ಕೆಡಬಾರದು' 'ಜಪ -ತಪ ಅನುಷ್ಠಾನ' 'ದೇವರುಗಳೂ ಡೆಮಾಕ್ರಸಿಯೂ' 'ಮಡಿ ಹಾರುವಯ್ಯ ಹಜಾಮನಾದದ್ದು'** ಮುಂತಾದ ಪ್ರಬಂಧಗಳನ್ನು

ಗಮನಿಸಿಬಹುದಾಗಿವೆ. ಉದಾಹರಣೆಗೆ ಅವರ ಹಾರುವಯ್ಯ ಹಜಾಮನಾದದ್ದು ಪ್ರಬಂಧದ ಈ ಮಾತುಗಳನ್ನು ಗಮನಿಸಬಹುದು.

" ಮಲ್ಲಿಗೆ ಹಳ್ಳಿಯ ಜೋಡಿದಾರರು ತಮಗೆ ಕ್ಷೌರ ಮಾಡುವುದಕ್ಕೆ ಬೇರೆ ಒಬ್ಬ ಕ್ಷೌರಿಕನನ್ನು ಇಟ್ಟದ್ದರು ಅವನು ಬ್ರಾಹ್ಮಣರಿಗೆ ಹೊರತು ಇತರರಿಗೆ ಕ್ಷೌರ ಮಾಡಲು ಅವಕಾಶವಿರಲಿಲ್ಲ. ಆಕಾಲದಲ್ಲಿ ಮಲ್ಲಿಗೆ ಹಳ್ಳಿಗೆ ಇಬ್ಬರು ಕ್ಷೌರಿಕರಿದ್ದರು ಜೋಡಿದಾರರಾದ ಬ್ರಾಹ್ಮಣರಿಗೆ ಒಬ್ಬ ಉಳಿದ ಬ್ರಾಹ್ಮಣೇತತರರಿಗೆ ಒಬ್ಬ ಬ್ರಾಹ್ಮಣೇತತರರ ಕೌರಿಕ ಬ್ರಾಹ್ಮಣರಿಗೆ ಕ್ಷೌರ ಮಾಡುವ ಯೋಚನೆ ಕೂಡ ಉದ್ಧಟತನವಾಗಿದ್ದಿತಿತು. ಜೋಡಿದಾರರು ಬುದ್ಧಿವಂತನೂ ವಿಧೇಯನೂ ಆದ ಕ್ಷೌರಿಕನನ್ನು ತಾವು ಗೊತ್ತು ಮಾಡಿಕೊಂಡು ಒರಟನು ಕೊಳಕನು ಆದವನನ್ನು ಉಳಿದವರಿಗೆ ಬಡುತ್ತಿದ್ದರು".*

ಹೀಗೆ ಕಂಡುದನ್ನು ಕಂಡ ಹಾಗೆಯೇ ವಿವರಿಸುವ ದಿಟ್ಟ ಬರಹಗಾರರಾಗಿದ್ದರು ಗೊರೂರರ ಶೈಲಿ ಅತ್ಯಂತ ಸೂಕ್ಷ್ಮವಾದದ್ದು ಸೊಗಸಾದದ್ದು ಮನುಷ್ಯ ಸ್ವಭಾವದ ಏರು ಪೇರುಗಳನ್ನು ಹಾಸ್ಯ ತುಂಬದ ಧಾಟಿಯಲ್ಲಿ ಕಾಣುವ ಗುಣ ಇವರದ್ದು ರಸಿಕ ಮನಸ್ಸಿನ ಲವಲವಿಕೆಯಿಂದ ಕೂಡಿದ ಶೈಲಿಯನ್ನು ಇವರ ಪ್ರಬಂಧಗಳಲ್ಲಿ ಕಾಣಬಹುದು. ಇದಕ್ಕೆ **'ನಮ್ಮ ಊರಿನ ರಸಿಕರು'** ಕೃತಿ ಉತ್ತಮ ನಿದರ್ಶನವಾಗಿದೆ ಹರಿಶ್ಚಂದ್ರ ಆಟದಲ್ಲಿ ವಿಷ್ಣುವಿನ ಪಾತ್ರಮಾಡಿದ್ದವನು ಪ್ರೇಕ್ಷಕರೆಲ್ಲ ಏಳುವುದನ್ನು ಕಂಡು ರಂಗಸ್ಥಳಕ್ಕೆ ಬಂದು 'ನಾನು ವಿಷ್ಣುಬಂದಿದ್ದೇನೆ ಒಂದು ಗಳಿಗೆ ಇದ್ಕೊಂಡು ನಾನು ಆಡೋದ್ನ ನೋಡ್ಕೊಂಡು ಹೋಗಬೇಕು' ಎಂದನು ---------------- ಗುಂಡನು 'ಇವನು ಬಲತ್ಕಾರವಾಗಿ ಎಲ್ಲರನ್ನೂ ನಿಲ್ಲಿಸಿ ಕುಣೀದೆ ಹೋಗಿದ್ರೆ ಏನು ಉಳಿದು ಹೋಗ್ತಿತ್ತು' ಎಂದನು ಸಾಹೇಬನು ಹಾಗಲ್ಲ ಗುಂಡಪ್ಪ ನೆನ್ನೆ ರಾತ್ರಿಯಿಂದ ಕುಣೆಯೋಕೆ ಸಿದ್ದಮಾಡ್ಕೊಂಡು ನಿದ್ರೆಮಾಡದೆ ಮಿಟ ಮಿಟನೆ ಕಣ್ಣು ಬಿಟ್ಕೊಂಡು ಕೂತಿದಿದ್ದೋನ್ನ ಕುಣಿಬೇಡ ಅಂದ್ಬಿಟ್ರೆ ಅವನಿಗೆ ಎಷ್ಟು ಸಂಕಟ ಉಂಟಾಗಬಹುದು. ಕರ್ನಾಟ್ಕೆ ಜನಕ್ಕೆ ಇದು ಗೊತ್ತು ಅದ್ಕೆ ಅವರೊಬ್ಬರು ಕದಲದೆ ಕೂತು ಬಿಟ್ರೆ ಎಂದನು"* ಈ ಮೇಲಿನ ಸಾಲುಗಳನ್ನು ಗಮನಿಸಿದಾಗ ಅವರಲ್ಲಿದ್ದ ಸೂಕ್ಷ್ಮ ಸಂವೇಧನೆ ಮನದಟ್ಟಾಗುತ್ತದೆ.

---

* ನಮ್ಮ ಊರಿನ ರಸಿಕರು ಪು.ಸಂ.೫೫,೫೬.

ತಂತ್ರದ ದೃಷ್ಟಿಯಿಂದ ಗೊರೂರರು ಯಾವಾಗಲೂ ಸಡಿಲವಾಗಿಯೇ ಬರೆಯುತ್ತಾರೆ. ಹಾಗಾಗಿಯೇ ಇವರ ಪ್ರಬಂಧಗಳು ಮತ್ತು ಕಥೆಗಳಲ್ಲಿ ಅಂತಹ ವ್ಯತ್ಯಾಸವೇನು ಕಂಡುಬರದೆ ಕಥೆಗಳು ಮತ್ತು ಪ್ರಬಂಧಗಳನ್ನು ಗೆರೆಎಳೆದು ತೋರಿಸುವುದು ಕಷ್ಟವಾಗುತ್ತದೆ. ಈ ಕೊರತೆಯನ್ನು ಅವರ ಸುಗಮವಾದ ಕಥನ ಶೈಲಿ ಬಹುಬೇಗ ತುಂಬಕೊಡುತ್ತದೆ. ಅವರ **'ಬೆಟ್ಟದ ಮನೆಯಲ್ಲಿ'** ಎಂಬ **ಪ್ರಬಂಧ**ವಲ್ಲಿಯ ಈ ಸಾಲುಗಳನ್ನು ಗಮನಿಸಬಹುದು .

"ನಮ್ಮ ಊರಿನಿಂದ ಪಶ್ಚಿಮಕ್ಕೆ ಹೇಮಾವತಿ ನದಿಯ ತೀರದಲ್ಲಿ ನದಿಯ ಉಗಮ ಸ್ಥಾನದ ಕಡೆಗೆ ಇಪ್ಪತ್ತುಮೈಲಿಗಳು ಹೋದರೆ ನದಿಗೆ ಒಂದು ಕಟ್ಟೆಯನ್ನು ಹಾಕಿದ್ದಾರೆ. ಈಗ ಆ ಪ್ರಾಂತ್ಯವೆಲ್ಲ ಕಾಡು. ಕಟ್ಟೆಯ ಹತ್ತಿರಕ್ಕೆ ಹೋಗಬೇಕಾದರೂ ನಾಲ್ಕು ಆರು ಮೈಲಿ ಲಾಂಟಾನ ಮುಳ್ಳು ಗಿಡಗಳನ್ನು ಬಿಡಿಸಿಕೊಂಡು ಹೋಗಬೇಕು ಅದಾವ ಶಾಪವೋ ಆ ಕಟ್ಟೆ ಪೂರ್ತಿಯಾಗಲಿಲ್ಲ. ಕಟ್ಟೆಯನ್ನು ಮೊದಲು ನೋಡಿದ ಕೂಡಲೇ ನಮಗೆ ಉಂಟಾಗುವುದು ಅದ್ಭುತ ಆಶ್ಚರ್ಯಮನೋಭಾವ ಈ ಕಟ್ಟೆಗೆ ೫೦-೬೦ ಅಡಿ ಉದ್ದವಾದ ಹತ್ತು ಹದತನೈದು ಅಡಿ ಅಗಲ ದಪ್ಪ ಉಳ್ಳ ಕಲ್ಲುಗಳನ್ನು ಹಾಕಿದ್ದಾರೆ"*

ಹೀಗೆ ಸರಳವಾಗಿ ಕಥೆ ಹೇಳುವ ಶೈಲಿ ತಂತ್ರದ ಕೊರತೆಯನ್ನು ಮರೆಸುತ್ತದೆ ಆದರೆ ಅಮೃತವಾಕ್ಯದಂತಹ ಕಥೆಗಳು ಆಸೆ ಹುಟ್ಟಿಸುತ್ತವೆಯೇ ಹೊರತು ತಣಿಸುವುದಿಲ್ಲ.ಗೊರೂರರದ್ದು ಹಾಸ್ಯಪ್ರದಾನವಾದ ಶೈಲಿ ಈ ಹಾಸ್ಯ ಪ್ರವಾಹ ಕೆಲವೊಮ್ಮೆ ಹೊನಲಾಗಿ ಹರಿಯುತ್ತದೆ. ಈ ಹಾಸ್ಯದ ಜೊತೆ ಜೊತೆಯಲ್ಲಿಯೇ ಬೇರೆ ಧರ್ಮಗಳಲ್ಲಿ, ಜಾತಿಗಳಲ್ಲಿ ಇರುವಂತೆ ತಮ್ಮ ಮತದಲ್ಲಿ ಬೇರುಬಟ್ಟಿದಂತಹ ಮಡಿವಂತಿಕೆಯ ಪ್ರತಿಷ್ಠೆ, ಸಂಪ್ರದಾಯ ಆಚಾರ - ವಿಚಾರ ಮುಂತಾದವುಗಳಿಂದ ಉಂಟಾಗುವಂತಹ ಅನರ್ಥಗಳನ್ನು , ಹುಳುಕುಗಳನ್ನು ಮುಚ್ಚುಮರೆಯಿಲ್ಲದೆ ತೋರಿಸುತ್ತಾರೆ.

---

* ಬೆಟ್ಟದ ಮನೆಯಲ್ಲಿ , ಇತರ ಪ್ರಬಂಧಗಳು, ಪುಟ ಸಂಖ್ಯೆ : ೦೧.

"ಒಂದು ಸಲ ಮಲ್ಲಿಗೆ ಹಳ್ಳಿಯಲ್ಲಿ ಜೋಡಿದಾರರ ಮನೆಯಲ್ಲಿ ಭಾರಿ ಸಮಾರಾಧನೆ ಆಯಿತು ಊಟವಾದ ಮೇಲೆ ವೈದಿಕರಿಗೆ ಕುಳಿತುಕೊಳ್ಳಲು ಚಾಪೆ ಹಾಸಿ ಚಾಪೆಯ ಮೇಲೆ ಎಲೆ ಅಡಿಕೆಯನ್ನು ಇಟ್ಟಿದ್ದರು. ಚೇಣಿಯ ಚಾಪೆಗಳು ಸಾಲದುದರಿಂದ ಹಜಾರದ ಒಂದು ಕಡೆಗೆ ವೈದಿಕರಲ್ಲದ ಹುಡುಗರು ಕುಳಿತುಕೊಳ್ಳುವುದಕ್ಕಾಗಿ ಒಂದೆರೆಡು ಈಚಲ ಚಾಪೆಗಳನ್ನು ಹಾಸಿದ್ದರು. ಕೇಶವಚಾರ್ರು ಈಚಲ ಚಾಪೆಗಳನ್ನು ನೋಡಿ 'ಅವುಗಳನ್ನು ಸುತ್ತಿಬಿಡಿ ಬ್ರಾಹ್ಮಣರ ಮನೆಯಲಿ ಹಾಳಾದ್ದು ಇದು ಯಾಕ ' ಎಂದರು ಜೋಡಿದಾರರು ಕೂಡಲೇ ಚಾಪೆಯನ್ನು ಸುತ್ತುವಂತೆ ಮಗಸಿಗೆ ಹೇಳಿದರು. ಆದರೆ ಅಷ್ಟರಲ್ಲಿಯೇ ನಮ್ಮೂರ ನಾಣಿ ಮುಂದೆಬಂದು ಅಲ್ರಿ ಕೇಶವಚಾರ್‌ಸ್ವಾಮಿ ಈಚಲ ಚಾಪೆಯ ಮೇಲೆ ಯಾಕೆ ಕೂತ್ಕೊಬಾರದು ಎಂದ ಕೇಶವಾಚಾರ್ರು ಕೋಪದಿಂದ 'ಯಾಕ್ಕೇ ಈಚಲ್ಚಾಪೆ ಹೆಂಡ ತೆಗೀತಾರೆ ಎಂದರು. ನಾಣಿಯು ' ಅಲ್ಲ ಸ್ವಾಮಿ ಈಚಲ ಚಾಪೇಲಿ ಹೆಂಡ ತೆಗಿಯೊಲ್ಲ ಈಚಲ್ಮರದಲ್ಲಿ ತೆಗೀತಾರೆ. ಅದಿರಲಿ ತೆಂಗಿನ ಮರದಲ್ಲೂ ಹೆಂಡ ತೆಗೀತಾರಲ್ಲಾ ಸ್ವಾಮಿ ಆದರೆ ತೆಂಗಿನಕಾಯಿ ಯಾಕೆ ತಿನ್ನೀರಿ ? " ಎಂದ ಕೇಶವಾಚಾರ್ರು ಕೋಪದಿಂದ " ಈ ಕಾಲದ ಹುಡ್ಗರ್ಗೆ ತಲ್ಯೆಲ್ಲಾ ಪ್ರತಿಷ್ಠೆ ಹೇಳಿದಷ್ಟು ತಿಳ್ಕೊಳೋಗೋಜಿಲ್ಲ. ಆಚಾರ ಕೆಟ್ರು ಆಕಾರ ಕೆಡ್ಬಾರ್ದಯ್ಯ" * ಎಂದು ಹೇಳಿ ಸುಮ್ಮನಾದರು.

ಹೀಗೆ ಹಲವಾರು ನಿದರ್ಶನಗಳನ್ನು ಕೊಡಬಹುದು. ಗ್ರಾಮ ಜೀವನದ ಸರಳ ಸೌಂದರ್ಯವನ್ನು ಅಂತರಂಗದಿಂದ ಸೂಕ್ಷ್ಮವಾಗಿ ಗಮನಿಸಿ ತದ್ರೂಪವಾಗಿ ಚಿತ್ರಿಸುತ್ತಾರೆ. ಅವರ ಈ ಚಿತ್ರಣದಲ್ಲಿ ಕಲ್ಪನೆಗಳಿಗೆ ಸ್ಥಳವೇ ಇರುವುದಿಲ್ಲ. ವೈಚಾರಿಕ ವಿಚಾರಗಳೂ ಮಹತ್ವವಾದ ಸ್ಥಾನವನ್ನು ಪಡೆದುಕೊಳ್ಳುವುದಿಲ್ಲ. ಗ್ರಾಮೀಣ ಬದುಕಿನ, ಮಧ್ಯಮವರ್ಗದ ಜೀವನ ವಿಧಾನವನ್ನು ತಮ್ಮ ಸಾಹಿತ್ಯಕ್ಕೆ ಆಯ್ಕೆ ಮಾಡಿಕೊಂಡಿರುವುದರಿಂದ ಇವರ ಪ್ರಬಂಧಗಳಲ್ಲಿ ಒಂದಕ್ಕೂ ಮತ್ತೊಂದಕ್ಕೂ ಹೆಚ್ಚಿನ ಅಂತರ ಕಂಡುಬರುವುದಿಲ್ಲ. ಅಪ್ರಯತ್ನ ಪೂರ್ವಕವಾದ ಕಲೆಗಾರಿಕೆಯಿಂದಾಗಿ ಸಹೃದಯರ ಮನಸ್ಸನ್ನು ತಮ್ಮತ್ತ ಸೆಳೆದುಕೊಳ್ಳುತ್ತಾರೆ. ಅವರ ಪ್ರಬಂಧಗಳ ಒಳಗೆ ಒಂದು ಉದಾರವಾದ ಮನಸ್ಸು ಮಾತಾನಾಡುವಂತೆ ತೋರುತ್ತದೆ.

* ಗರುಡ ಗಂಬದ ದಾಸಯ್ಯ ಪು ಸಂ. ೩೯

ಗೊರೂರರ ಬರವಣಿಗೆಯ ಸೀಮಿತತೆಯನ್ನು ಗುರುದತ್ತರು ಈ ರೀತಿಯಾಗಿ ಗುರುತಿಸಿದ್ದಾರೆ- " ಮೊದಲನೆಯದು ಅವರಲ್ಲಿ ಉದ್ದೇಶಿತ ಕಲೆ ಎಂಬುದಿಲ್ಲ. ಅವರು ಲೀಲಾಜಾಲವಾಗಿ ಸಹಜವಾಗಿ

ಕಥೆಗಳನ್ನು ಹೇಳಿಕೊಂಡು ಹೋಗುತ್ತಾರೆ. ಸ್ವಾನುಭಾವದರಿತವಾಗಿರುವ ಅನೇಕ ಕಥೆಗಳಲ್ಲಿ ಲೇಖಕರೇ ಒಂದು ಪಾತ್ರವಾಗಿ ಕಾಣಿಸಿಕೊಂಡು ನಿರೂಪಕರಾಗಿ ಕಥೆಯನ್ನು ಸಾಗಿಸುವುದನ್ನು, ತೀರ್ಮಾನಗಳನ್ನು ಕೊಡುವುದನ್ನು ಕಾಣುತ್ತೇವೆ. ಆಧುನಿಕರಲ್ಲಿ ಕಾಣಿಸಿಕೊಳ್ಳುವ ಪ್ರಜ್ಞಾಪೂರ್ವಕ ಕಲೆಯಾಗಲಿ, ಬಿಗಿಯಾದ ಬಂಧವಾಗಲಿ ಸುನಿಶ್ಚಿತ ತಂತ್ರವಾಗಲಿ, ಸಂಕೇತ ಪ್ರತಿಮೆಗಳ ಬಳಕೆಯಾಗಲಿ ಗೊರೂರರಲ್ಲಿ ಕಾಣಿಸುವುದೇ ಇಲ್ಲ ಎರಡನೆಯಾದಾಗಿ ರೈತ ಸಮುದಾಯದ ವಿಶಿಷ್ಟ ಸಮಸ್ಯೆಗಳು ಸುಖ - ದುಃಖಗಳು, ಕೃಷಿಕಾರ್ಯದ ಇತರ ಚಟುವಟಿಕೆಗಳು ಇಲ್ಲಿ ಸಮಗ್ರ ರೂಪದಲ್ಲಿ ಕಾಣಿಸಿಕೊಳ್ಳುವುದೇ ಇಲ್ಲ. ಹಾಗೆಯೇ ಗೊರೂರರ ಗಮನ ಘಟನೆಗಳ ನಿರೂಪಣೆಯ ಕಡೆಗೆ ಹೆಚ್ಚಾಗಿ ಹರಿಯುತ್ತದೆಯೇ ಹೊರತು ಪಾತ್ರಗಳ ಒಳತೋಟಿಯನ್ನು ಚಿತ್ರಿಸುವತ್ತ ಅಲ್ಲ ಎಂಬ ಭಾವನೆಯೂ ಮೂಡುತ್ತದೆ."*

ಈ ಮೇಲಿನ ಮಾತುಗಳನ್ನು ಗಮನಿಸಿದಾಗ ಗೊರೂರರ ಅಭಿವ್ಯಕ್ತಿ, ಶೈಲಿಗಳ ಬಗೆಗಿನ ಒಂದು ಸೂಕ್ಷ್ಮ ನೋಟ ದೊರೆತಂತಾಗುತ್ತದೆ.

ವ್ಯಕ್ತಿ, ಸಂದರ್ಭ ಮತ್ತು ಸನ್ನಿವೇಶಗಳಿಗೆ ತಕ್ಕಂತೆ ಸಾಹಿತ್ಯದಲ್ಲಿ ಭಾಷೆಯನ್ನು ಬಳಸುವುದರಿಂದ ಸಾಹಿತ್ಯದ ಬೇರೆ-ಬೇರೆ ಪ್ರಕಾರಗಳಲ್ಲಿ ಕಾಣಿಸಿಕೊಳ್ಳುವ ಭಾಷಾವೈವಿಧ್ಯಕ್ಕೂ ದೈನಂದಿನ ವ್ಯವಹಾರದಲ್ಲಿ ಬಳಕೆಯಾಗುವ ಭಾಷಾ ವೈವಿದ್ಯಕ್ಕೂ ವ್ಯತ್ಯಾಸ ಕಾಣಿಸಿಕೊಳ್ಳಲು ಸಾಧ್ಯವಾಗಿದೆ. ಸಾಹಿತಿ ಮತ್ತು ಭಾಷೆ, ಅನುಭವ ಮತ್ತು ಭಾಷೆ ಇವುಗಳ ಪರಸ್ಪರ ಹೊಂದಾಣಿಕೆಯಿಂದ ವಿಶಿಷ್ಟ ಪದಗಳ ಜೋಡಣೆಯಾಗಿರುವುದು ಗೊರೂರರ ಸಾಹಿತ್ಯದ ವೈಶಿಷ್ಟ್ಯ. ಗ್ರಾಮ ಜೀವನದ ಹತ್ತು ಹಲವು ಮುಖಗಳಿಗೆ ಚಿರಸ್ಮರಣೀಯ ಅಭಿವ್ಯಕ್ತಿಯನ್ನು ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ನೀಡಿ ಅಮರರಾಗಿದ್ದಾರೆ.

---

* ಗೊರೂರು ರಾಮಸ್ವಾಮಿ ಅಯ್ಯಂಗಾರ್- ಪು. ಸಂ. ೩೩.

# ಅಧ್ಯಾಯ - ೬

## ಹಾಸ್ಯ ಪ್ರಸಂಗಗಳು

ಹಾಸ್ಯ ಹಾಗೂ ವಿನೋದಗಳು ಮಾನವನ ಬದುಕಿನ ಅವಿಭಾಜ್ಯವಾದ ಅವಿಗಗಳ ಹಾಗೆ ಇವು ಜೀವನ ಲವಲವಿಕೆಯಿಂದ ಇರುವುದಕ್ಕೆ ಸಹಾಯಕವಾಗುತ್ತವೆ ಶ್ರೀ ಅರವಿಂದರು ಹಾಸ್ಯ ವೆಂದರೆ "ಕಂಬನಿಯನ್ನು ನಗೆಯನ್ನಾಗಿ ಪರಿವರ್ತಿಸುವ ಕರ್ಮಕೌಶಲ"ಎಂದಿದ್ದಾರೆ, ಹಾಸ್ಯವೇ ಇಲ್ಲದ ಬಾಳು ಬಾಳಲ್ಲ ಹಾಸ್ಯ ಜೀವನವನ್ನು ಉಲ್ಲಾಸಮಯವನ್ನಾಗಿಸುತ್ತದೆ. ಹಾಸ್ಯದಿಂದ ಕೂಡಿದ ಬದುಕು ಸಂತೋಷವನ್ನು , ನೆಮ್ಮದಿಯನ್ನೂ ನೀಡುತ್ತದೆ. ಉತ್ತಮ ಹಾಸ್ಯವು ಆನಂದದ ಒಂದು ಸ್ವರೂಪ, ಜ್ಞಾನಕ್ಕೆ ಒಂದು ಬಾಗಿಲು ಇಂದು ನಾಗರೀಕರಣದಿಂದಾಗಿ ಬದುಕು ಯಾಂತ್ರಿಕವಾಗಿದೆ. ಇಂತಹ ಯಾಂತ್ರಿಕ ಬದುಕಿನ ನಡುವೆ ನರಳುತ್ತಿರುವ ಜನರಿಗೆ ಹಾಸ್ಯ ಕನಸಿನ ಮಾತಾಗಿದೆ. ಇಂತಹ ಬದುಕಿನ ಎಂಜಡದಿಂದಾಗಿ ಜನಗಳ ಮುಖದಲ್ಲಿ ನಗು ಮಾಯವಾಗುತ್ತಿದೆ.

ಸಾಹಿತ್ಯದಲ್ಲಿ ಹಾಸ್ಯದ ಜೀವಂತಿಕೆಯನ್ನು ತುಂಬಬೇಕಾದರೆ ಕವಿ ಸ್ವತಃ ಹಾಸ್ಯಗಾರರಾಗಿರಬೇಕು. ತಾವೂ ನಕ್ಕು , ಓದುಗರನ್ನು ನಗಿಸುವ ಕಲೆಯನ್ನು ಬಲ್ಲವರಾಗಿರಬೇಕು. ಇದಕ್ಕೆ ಕವಿಯಲ್ಲಿ ಸಹಜಶಕ್ತಿ ಇರಬೇಕು ಕವಿಯಲ್ಲಿರುವ ಇಂತಹ ಶಕ್ತಿಯನ್ನು ಹಾಸ್ಯ ಪ್ರದರ್ಶನ ಶಕ್ತಿ ಎಂಬುದಾಗಿ ಕರೆಯುತ್ತಾರೆ. ಗೊರೂರರಲ್ಲಿ ಇಂತಹ ಕುಶಲತೆಯನ್ನು ಕಾಣಬಹುಮಾಗಿದೆ. ದುಃಖದಲ್ಲೂ ಸಹಜವಾಗಿಯೇ ಹಾಸ್ಯ ಪ್ರಿಯರು ಆದ್ದರಿಂದಲೇ ಅವರ ಸಾಹಿತ್ಯದಲ್ಲಿ ನಿರಂತರವಾದ ಹಾಸ್ಯ , ಹಾಸ್ಯೋಕ್ತಿಗಳು, ವರ್ಣನೆಗಳು ಘಟನೆಗಳು ವಿಫಲವಾಗಿವೆ. ತಾವು ಹೋದಲ್ಲೆಲ್ಲಾ ಹಾಸ್ಯದ ಹೊನಲನ್ನೇ ಹರಿಸಿದವರು ಗೊರೂರು.

ಕಥೆಗಳಲ್ಲಿ ಹಾಸ್ಯವನ್ನು ಪ್ರಧಾನವಾಗಿ ತಂದವರಲ್ಲಿ ಗೊರೂರರು ಪ್ರಮುಖರಾಗಿದ್ದಾರೆ. ಅವರ ಹಾಸ್ಯ ಪ್ರಮುಖವಾದ ಬರಹಗಳಲ್ಲಿಯೂ ಜೀವನದ ಗಾಂಭೀರ್ಯವನ್ನು ಗುರುತಿಸಬಹುದಾಗಿದೆ.ಅವರ ಒಂದೊಂದು ಪಾತ್ರಗಳೂ ಹಾಸ್ಯದ ಹೊನಲನ್ನೇ ಹರಿಸುತ್ತವೆ. ಇಂತಹ ಪ್ರಸಂಗಗಳಲ್ಲಿ ಅತಿಶಯೋಕ್ತಿಯೇ ಹೆಚ್ಚಾಗಿ ಕಂಡುಬಂದರೂ ಅದು ಹಾಸ್ಯಕ್ಕೆ ಮೆರುಗನ್ನು ತಂದುಕೊಡುತ್ತದೆ. ಅನಕೃ

ತಮ್ಮ ' ಸಾಹಿತ್ಯ ಮತ್ತು ಜೀವನ ' ಕೃತಿಯಲ್ಲಿ ಹಾಸ್ಯವಿಲ್ಲದ ಬಾಳು ದೇವರಿಲ್ಲದ ದೇಗುಲದಂತೆ, ದೀಪ್ತಿಯಿಲ್ಲದ ದೀವಿಗೆಯಂತೆ , ಕಪ್ಪುಮೋಡ ತುಂಬದ ಜೀವನಕಾಶದಲ್ಲಿ ಹಾಸ್ಯವು ಒಳ್ಳೆಯ ಬೆಳಕು ಬೆಳಗಿದಂತೆ ಎಂದಿದ್ದಾರೆ.

ಗೊರೂರರ ಹಾಸ್ಯಪ್ರಜ್ಞೆಯ ಬಗೆಗೆ ಕುವೆಂಪುರವರು ಈ ರೀತಿಯಾಗಿ ಹೇಳಿದ್ದಾರೆ" ಚಾರ್ಲ್ ಡಿಕನ್ಸ್ , ಅಲಿವರ್ ಗೋಲ್ಡ್ ಸ್ಥಿತ್ ಎ.ಜಿ.ಗಾರ್ಡಿನರ್ ಮುಂತಾದ ಇಂಗ್ಲೀಷ್ ಲೇಖಕರ ಬರವಣಿಗೆಯನ್ನು ಓದಿ ಅಲ್ಲಿನ ವಿವಿಧ ಹಾಸ್ಯವನ್ನು ಚಪರಿಸಿದ್ದ ನಮಗೆ ಕನ್ನಡದಲ್ಲಿ ಅಂತಹ ಹಾಸ್ಯದ ಅರಕೆ ದೊಡ್ಡಕೊರಗನ್ನೆ ಉಂಟುಮಾಡಿತ್ತು. ಆ ಅರಕೆಯನ್ನು ಹೋಗಲಾಡಿಸಿದ ಕೆಲವೇ ಲೇಖಕರಲ್ಲಿ ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರರು ನಿಶ್ಚಯವಾಗಿಯು ಅಗ್ರಸ್ಥಾನದಲ್ಲಿದ್ದಾರೆ. ------------------ - ಎಂತಹ ಸ್ಪಟಿಕ ಸ್ವಚ್ಚವಾದ ಹಾಸ್ಯ ಅವರದು! ಅಲ್ಲಿ ಯಾವ ಬಗೆಯ ಕೊಂಕು ಇಲ್ಲ ಯಾವ ವಿಷದ ಬಾಲದ ಕುಟುಕು ಇಲ್ಲ. ಮೊನಚಾಗಿ ಒಳಹೊಕ್ಕು ಅಲ್ಲೇ ಮುರಿದುಕೊಳ್ಳುವ ಮುಳ್ಳೂ ಇಲ್ಲ. ಕೃತಕತೆ ಇಲ್ಲದ , ಬದುಕಿನ ಘಟನೆಗಳಿಂದ ತನಗೆ ತಾನೇ ಒಡೆದು ಮೂಡುವ , ಮೂಡಿ ಮನದುಂಬುವ , ಮನದುಂಬ ನಕ್ಕು ನಲಿಸುವ ಶುದ್ಧವಾದ ಹಾಸ್ಯ ಅವರದು"

ಗೊರೂರರ ಸಾಹಿತ್ಯದಲ್ಲಿ ಹಾಸ್ಯ ಪ್ರಸಂಗಗಳಿಗೇನೂ ಕೊರತೆ ಇಲ್ಲ. ಆದರೆ ಅವರ ಈ ಹಾಸ್ಯ ಪ್ರಸಂಗಗಳು ಹೊಟ್ಟೆ ಹುಣ್ಣಾಗಿಸುವಂತೆ ನಗಿಸುವವುಗಳಲ್ಲ. ಒಂದು ನಗುವಿನ ರೇಖೆ ಮುಖದ ಮೇಲೆ, ಮನಸ್ಸಿನ ಆಳದಲ್ಲಿ ಹರಿದುಹೋಗುವಂತೆ ಮಾಡುವ ಮೃದು , ಗಂಭೀರ ಹಾಸ್ಯಗಳಾಗಿವೆ. ತಮ್ಮ ಹಾಸ್ಯಗುಣದಿಂದಾಗಿಯೇ ಪ್ರಾಮುಖ್ಯ ಪಡೆದುಕೊಂಡಂತಹ ಕೆಲವು ಪಾತ್ರಗಳು ಇವೆ. ಅವುಗಳಲ್ಲಿ ನಾಣಿಯ ಪಾತ್ರವು ಪ್ರಮುಖವಾದುದು.

ನಾರಾಣಯ್ಯಂಗಾರ್ ಎಂಬ ಹೆಸರಿನ ಸುಮಾರು ನಲವತ್ತು ವರ್ಷದ ನಾಣಿ ತನ್ನ ಇಪ್ಪತ್ತನೇಯ ವಸ್ಸಿನಲ್ಲಿಯೇ ಮದುವೆಯಾಗಿ ವಿಧುರನಾದವನು . ಈತ ಬಹಳ ವಿನೋದ ಪ್ರಿಯ ತನ್ನ ಈ ಗುಣದಿಂದಾಗಿಯೇ ಎಲ್ಲರಿಗೂ ಅಚ್ಚುಮೆಚ್ಚಿನವನಾಗಿದ್ದನು. " ನಾಣಿಯು ಯಾವಾಗ

ಮಾತನಾಡಬೇಕಾದರೂ ಅಂತ್ಯ ಪ್ರಾಸವಿಲ್ಲದೇ ಮಾತನಾಡುವುದೇ ಇಲ್ಲ . ನಮ್ಮೂರ ಒಬ್ಬ ಹುಡುಗನಿಗೆ ಮುಂಜಿಯ ಮಾತು ಬಂತು ಕೂಡಲೇ ನಾಣಿಯು

ಅವನ್ಗೆ ಯಾಕೆ ಮುಂಜಿ
ಕುಡಿಯೋಕೆ ಇಲ್ಲ ಗಂಜಿ
ನೊಲ್ಲಿ ಹತ್ತಿ ಹಿಂಜಿ
ಸಿಕ್ಕುತ್ತೆ ಹೊಟ್ಟೆಗೆ ಗಂಜಿ

ಪೇಟೆಯ ಚೋರನು ಯಾರಿಗೋ ಲಗ್ನವಾಗುತ್ತದೆ ಎಂದ ಕೂಡಲೇ ನಾಣಿಯು

ಅವನ್ಗೆ ಇಲ್ಲ ಲಗ್ನ
ಮನೆಗೆ ಬಂದಿಲ್ಲ ಹೆಣ್ಣ (ಹೆಂಡತಿ)
ಇರೋದೆಲ್ಲ ಆಮೇಲೆ ಭಗ್ನ
ಮೈಯಲ್ಲಾ ಬರಿ ನಗ್ನ ( ಸಾಲ)

ಎಂದನು

ನಾಣಿಯು ಹೀಗೆ ತಾನು ಹೋದ ಕಡೆಯಲ್ಲೆಲ್ಲಾ ಎಲ್ಲರನ್ನೂ ನಗಿಸುತ್ತಿದ್ದನು ಇವುಗಳನ್ನು ಓದಿದಾಗ ನಮಗೂ ಸಹ ಒಂದು ಕ್ಷಣ ನಗುಬರುತ್ತದೆ.

ಗೊರೂರರ ಹಾಸ್ಯೋಕ್ತಿಗೆ ಮತ್ತೊಂದು ಉತ್ತಮ ಉದಾಹರಣೆಯೆಂದರೆ ' **ನಮ್ಮ ಎಮ್ಮೆಗೆ ಮಾತು ತಿಳಿಯುವುದೆ ?** ಎಂಬ ಪ್ರಬಂಧದಲ್ಲಿ ಬರುವ ಎಮ್ಮೆಯ ಪ್ರಸವದ ಸಂದರ್ಭ ಹೀಗಿದೆ.ಎಮ್ಮೆ ಯಾವಾಗಲೂ ನಿಂತುಕೊಂಡೆ ಕರುಹಾಕುತ್ತದೆ ಎಂಬ ಕಾರಣದಿಂದ ಈ ಬಾರಿ ಕರುವನ್ನು ಹಿಡಿದುಕೊಳ್ಳಬೇಕು ಎಂದು ಕೊಂಡು ಲೇಖಕರು ಮತ್ತು ತೂರ ನಡೆಸಿದ ತಯಾರಿನ್ನು ವಿವರಿಸಬಹುದು. " ಎಮ್ಮೆಗೆ ಪ್ರಸವ ವೇದನೆ ಪ್ರಾರಂಭವಾಗಿದೆ. ಎಂದು ತೂರಾ ಸೂಚಿಸಿದ. ಎಮ್ಮೆ ನಿಂತುಕೊಂಡೆ ಇದ್ದಿತು. ಇದು ಮಲಗಿಕೊಂಡು ಕರಹಾಕುವುದಿಲ್ಲ ಅದೇ ಇದರ ಕೆಟ್ಟ ಚಾಳಿ ಎಂದ ತೂರ. ನಾವು ಅಂದಾಜುಮಾಡಿ ಎಮ್ಮೆ ನಿಂತಿದ್ದ ನೇರದಿಂದ ಒಂದು ಮಾರು ಆಚೆಗೆ ಪ್ರಾಯಶಃ ಕರುವನ್ನು ಇಲ್ಲಿಗೆ ಎಸೆಯಬಹುದು ಎಂದುಕೊಂಡು ಗೋಣಿಚೀಲದ ಆಚೆ ಈಚೆ ಹಿಡಿದುಕೊಂಡು ನಿಂತುಕೊಂಡೆವು ಎಮ್ಮೆ ಒಂದು ಮಾರು ಬಲಗಡೆಗೆ ತನ್ನ ಹಿಂಬಾಗವನ್ನು ತಿರುಗಿಸಿಕೊಂಡು ನಿಂತಿತು.

ನಾವು ಸರ್ರನೆ ಚೀಲದೊಂದಿಗೆ ಅದರ ನೇರಕ್ಕೆ ಹಾರಿ ನಿಂತುಕೊಂಡೆವು. ಎಮ್ಮೆ ಕೂಡಲೇ ಎರಡುಮಾರು ಎಡಗಡೆಗೆ ತನ್ನ ಹಿಂಬಾಗವನ್ನು ತಿರುಗಿಸಿತು. ನಾವು ಗೋಣಿಚೀಲದೊಂದಿಗೆ ಹಾರಿದೆವು . ಎಮ್ಮೆ ನಿಮಿಷ ನಿಮಿಷಕ್ಕೂ ತಿರುಗತೊಡಗಿತು. ನಾವು ನಿಮಿಷ ನಿಮಿಷಕ್ಕೂ ಕೊಕ್ಕಿನ ಆಟದಲ್ಲಿಯಂತೆ ಹಾರತೊಡಗಿದೆವು. ಸರ್ಕಸ್ ನಲ್ಲಿ ಮೇಲುಗಡೆ ಒಬ್ಬ ಆಟಗಾರ ಸಾಧನೆ ಮಾಡುತ್ತಿರುವಾಗ ಅವನ ಕೈಕಾಲು ಜಾರಿತೆಂಬ ಭಯದಿಂದ ಕೆಳಗಡೆ ಹತ್ತಾರು ಜನ ಬಂದು ಜಮಕಾನ ಹಿಡಿದುಕೊಂಡು ಅವನ ನೇರದಲ್ಲಿ ತಿರುಗುವುದನ್ನು ನೀವು ಕಂಡಿದ್ದೀರಿ. ನಮಗೂ ಎಮ್ಮೆಗೂ ಉಂಟಾದ ಸ್ಪರ್ಧೆ ಈ ಬಗೆಯದಾಯಿತು. ಬರಬರುತ್ತಾ ಎಮ್ಮೆ ನಿಮಿಷಕ್ಕೆ ಎರಡುಸಲ ತಿರುಗಲು ಪ್ರಾರಂಭಿಸಿತು. ಅದು ಈ ವಿನೋದದಲ್ಲಿ ಕರುಹಾಕಬೇಕೆಂಬುದನ್ನೆ ಪೂರ್ಣವಾಗಿ ಮರೆತಂತೆ ತೋರಿತು. ಈ ಓಡಾಟದಲ್ಲಿ ಎಮ್ಮೆಗಿಂತ ನಮಗೆ ಹೆಚ್ಚು ಸುಸ್ತಾಗಿ ನಮ್ಮ ಅಳ್ಳೇಗಳು ಹೊಡೆದುಕೊಳ್ಳತೊಡಗಿದವು ಎಮ್ಮೆ ಮಾತ್ರ ಹಿಂದಿನ ಚೇಷ್ಟೆಯ ನಗುವಿನಿಂದ ಮತ್ತೆ ನನ್ನ ಕಡೆ ನೋಡಿತು. ಇದು ಸದ್ಯಕ್ಕೆ ಕರುಹಾವುದಿಲ್ಲ . ಇನ್ನೂ ಒಂದು ಘಂಟೆ ಬಿಟ್ಟು ಬರೋಣವೆಂದು ನಾನು ತೂರನು ಚೀಲವನ್ನು ಒಂದು ಮೂಲೆಗಿಟ್ಟು ಒಳಕ್ಕೆ ಹೋದೆವು. ಒಂದು ನಿಮಿಷದೊಳಗಾಗಿ ಕೊಟ್ಟಿಗೆಯಲ್ಲಿ ದೊಪ್ಪೆಂದು ಸದ್ದಾಯಿತು ಹೋಗಿ ನೋಡಿದರೆ ಎಮ್ಮೆ ಪದ್ದತಿಯಂತೆ ನಿಂತುಕೊಂಡೆ ಎರಡುಮಾರು ಆಚೆ ಕರುವನ್ನು ಎಸೆದಿದ್ದಿತು. " *

' ನಮ್ಮ ಊರಿನ ರಸಿಕರು' ಗ್ರಂಥ ಹಾಸ್ಯ ಪ್ರಧಾನವಾದ ಕೃತಿಯಾಗಿದೆ. ಲೇಖಕರು ತಮ್ಮ ಊರಿನ ವಿನೋದ ಪ್ರಿಯರನ್ನು ಸಾಹಿತ್ಯದ ಮೂಲಕ ನಮಗೆ ಪರಿಚಯ ಮಾಡಿಕೊಡುತ್ತಾರೆ. ಈ ರಸಿಕರನ್ನು ಲೇಖಕರು ನಮಗೆ ಈ ರೀತಿಯಲ್ಲಿ ಮೊದಲಿಗೆ ಪರಿಚಯಿಸುತ್ತಾರೆ.

---

* ಬೆಸ್ತರ ಕರಿಯ , ಪುಟ ಸಂಖ್ಯೆ ೬೪,೬೫ .

" ನಮ್ಮ ಊರಿನವರೆಲ್ಲಾ ಬಹಳ ರಸಿಕರು. ಅಲ್ಲಿ ವಿನೋದ ಪ್ರಿಯರಲ್ಲದವರೂ ಯಾರೂ ಸಿಕ್ಕುವುದಿಲ್ಲ. ಕೋಪಿಷ್ಟರಾಗಲಿ , ಮುಖವನ್ನು ಗಂಟುಹಾಕಿಕೊಳ್ಳುವವರಾಗಲಿ ಅಲ್ಲಿಗೆ ಬಂದರೆ ಕೂಡಲೇ ಮಾಯವಾಗಿಬಡುತ್ತಾರೆ. ಅಥವಾ ಮುಂಗೋಪವನ್ನು ಬಟ್ಟು ಎಲ್ಲರಂತೆ ತಾವು ನಗಲು ಪ್ರಾರಂಭಿಸುತ್ತಾರೆ." * ಇದಕ್ಕೆ ನಿದರ್ಶನವಾಗಿ ಅನೇಕ ಘಟನೆಗಳನ್ನೂ ವಿವರಿಸುತ್ತಾರೆ. ಈಗ ಕೆಲವು ಘಟನೆಗಳನ್ನು ನೋಡಬಹುದು.

"ನಮ್ಮ ಊರಿನವರು ಹರಿಶ್ಚಂದ್ರನ ಆಟವಾಡಲು ನಿಶ್ಚಯಿಸಿದರು . ಆಡಿಸುವುದಕ್ಕೆ ಶಾಲು ಸಾಬಿಯೇ ಮುಖಂಡ . ಆಟವು ಪ್ರಾರಂಭವಾಯಿತು -------------------- ಪರದೆಯನ್ನು ಮೇಲಕ್ಕೆ ಎತ್ತಿದರು . ಹರಿಶ್ಚಂದ್ರನ ದರ್ಭಾರು ಕಣ್ಣಿಗೆ ಬತ್ತು . ಹರಿಶ್ಚಂದ್ರನು ಸಾಬಯ ರುಮಾಲನ್ನು , ಗುಂಡನ ಕನ್ನಡಕವನ್ನು ಧರಿಸಿ , ಕೈಯಲ್ಲಿ ಗುಂಡನ ಬೆತ್ತವನ್ನು ಹಿಡಿದುಕೊಂಡಿದ್ದನು ಪರದೆ ಎತ್ತಿದ ಕೂಡಲೇ ಅವನು ' ಅರರೆ ಎನ್ನಯ ಸಮಾನರಾರು ? ' ಎಂದು ಆರಂಭಿಸಿದನು . --------------- ಚಂದ್ರಮತಿಯು ರಂಗಸ್ಥಳಕ್ಕೆ ಬರುವಾಗ ತಾನೇ - ' ಬಂದಾಳೋ ಚಂದ್ರಮತಿ - ಬಂದಾಳೋ' ಎಂಬುದಾಗಿ ಹಾಡುತ್ತಾ ಕುಣಿದುಕೊಂಡು ಬಂದಳು ----------------- ಹರಿಶ್ಚಂದ್ರನು ಮತ್ತೆ ರಂಗಸ್ಥಳಕ್ಕೆ ಬಂದನು . ಬಂದವನೇ ' ಅಥಳ , ವಿಥಳ, ರಸಾಥಳ, ಪದಾಥಳ, ಛಪ್ಪನ್ನೈವತ್ತಾರು ದೇಶಗಳಲ್ಲೂ --------------- ನನ್ನಂತಹ ದುರದೃಷ್ಟಶಾಲಿ ಇದ್ದಾನೇಯೇ ? ಎಂದನು . ಗುಂಡನು ಸಾಹೇಬನನ್ನು ಕುರಿತು ಅಥಳ; ವಿಥಳ , ರಸಾಥಳ, ಪದಾಥಗಳು ಲೋಕಗಳಲ್ಲವೇ ? ಅವುಗಳನ್ನು ಛಪ್ಪನ್ನೈವತ್ತಾರು ದೇಶಗಳು ಎಂದು ಹರಿಶ್ಚಂದ್ರನು ಹೇಳಿಬಿಟ್ಟನಲ್ಲ ? ಎಂದನು. ಸಾಹೇಬನು ಸ್ವಲ್ಪವು ಯೋಚಿಸಿದೆ ' ಹಿಂದೆ ಅವು ಲೋಕಗಳಾಗಿದ್ದು ; ಈಗ ಅವು ಛಪ್ಪನ್ನೈವತ್ತಾರು ದೇಶಗಳಾಗಿವೆ !' ಎಂದನು ಗುಂಡನು ಮಾತನಾಡಲಿಲ್ಲ .

ಆಟವು ಬೆಳಗಾದರೂ ಮುಗಿಯಲೇ ಇಲ್ಲ. ಸೂರ್ಯೋದಯವಾಗಿ ಹೊಂಬಣ್ಣದ ಎಳೆಬಿಸಿಲು ಸಭೆಯನ್ನೂ ರಂಗಸ್ಥಳವನ್ನೂ ಅಪ್ಪಿದ ಕೂಡಲೇ ನಾಟಕವನ್ನು ನಿಲ್ಲಿಸಬೇಕೆಂದು

* ನಮ್ಮ ಊರಿನ ರಸಿಕರು ಪುಟ ಸಂಖ್ಯೆ ೨೨, ೨೩.

ಸಾಬಿಯು ಅಪ್ಪಣೆ ಮಾಡಿದನು. ಆಗತಾನೇ ಹರಿಶ್ಚಂದ್ರನಿಗೆ ದೇವತೆಗಳೆಲ್ಲ ಪ್ರತ್ಯಕ್ಷವಾಗಲು ಬಂದಿದ್ದರು. ಆದರೆ ವಿಷ್ಣು ಇನ್ನೂ ಬಂದಿರಲಿಲ್ಲ. ಪಾಪ ವಿಷ್ಣುವು ಹಿಂದಲ ಸಾಯಂಕಾಲದಿಂದ ಚೆನ್ನಾಗಿ ಅಲಂಕಾರ ಮಾಡಿಕೊಂಡು ತನ್ನ ಸರದಿಯು ಬರುವುದೇ ಎಂದು ಕಾಯುತ್ತಾ ಇದ್ದನು . ರಾತ್ರಿಯೆಲ್ಲಾ ಕಷ್ಟಪಟ್ಟು ' ತರುಣ ತುಲಸಿಯ ಮಾಲೆಯೊಪ್ಪಲು ' ಎಂಬಂತೆ ಒಂದು ತುಳಸಿಮಾಲೆಯನ್ನು ಕಟ್ಟಿ ಕತ್ತಿಗೆ ಹಾಕಿಕೊಂಡಿದ್ದನು ಆಟವು ಪೂರ್ತಿಯಾಗಿ ಪ್ರೇಕ್ಷಕರೆಲ್ಲ ಏಳುವುದರಲ್ಲಿರುವುದನ್ನು ಕಂಡು ವಿಷ್ಣುವು ರಂಗಸ್ಥಳಕ್ಕೆ ಬಂದು ' ನಾನು ವಿಷ್ಣು ಬಂದಿದ್ದೇನೆ ಒಂದ್ಗಳಿಗೆ ಇದ್ಕೊಂಡು ನಾನು ಆಡೋದ್ನಾ ನೋಡ್ಕೊಂಡು ಹೋಗಬೇಕು' ಎಂದನು ಎದ್ದಿದ್ದವರೆಲ್ಲ ನಗುತ್ತಾ ಕುಳಿತುಕೊಂಡರು ವಿಷ್ಣುವು ಭಯಂಕರವಾಗಿ ಗರ್ಜಿಸುತ್ತಾ

ತರುಣ ತುಲಸಿಯ ಮಾಲೆಯೊಪ್ಪುವ

ಗರುವ ದೇವನ ಬರವಕಂಡನು ಬಾಗಿಲಲಿ ಜನಪಾ

ಎಂಬುದಾಗಿ ಪದೇ ಪದೇ ತುಳಸಿ ಮಾಲೆಯನ್ನು ತೋರಿಸುತ್ತಾ , ನಗುತ್ತಾ ನರ್ತನಮಾಡಿದನು ಗುಂಡನು ' ಇವನು ಬಲತ್ಕಾರವಾಗಿ ಎಲ್ಲರನ್ನೂ ನಿಲ್ಲಿಸಿ ಕುಣೀದೆ ಹೋಗಿದ್ರೆ ಏನು ಉಳಿದು ಹೋಗ್ತಿತ್ತು' ಎಂದನು.

ಗೊರೂರರು ಬ್ರಾಹ್ಮಣ ಸಮಾಜದಲ್ಲಿದ್ದ ಅತಿಯಾದ ಮಡಿವಂತಿಕೆ , ಬೂಟಾಟಿಕೆಗಳನ್ನು ಜೊತೆಗೆ ಜನರಲ್ಲಿ ಮನೆಮಾಡಿಕೊಂಡಿರುವ ಅಜ್ಞಾನ ಮೂಡನಂಬಿಕೆಗಳನ್ನು ತಮ್ಮ ತಿಳಿಹಾಸ್ಯದ ಮೂಲಕವೇ ವಿಡಂಭಿಸುತ್ತಾರೆ. ಉದಾಹರಣೆಗೆ ಪೂಜಾರಿ ಸಾತಾನಿ ನಾರಾಣಯ್ಯನು ಆಂಜನೇಯ ಸ್ವಾಮಿಯ ಮೂರ್ತಿಯನ್ನು ಮಾತನಾಡಿಸಿ ಶಕುನ ಹೇಳುವ ವೈಖರಿಯನ್ನು ನೋಡಬಹುದು.

" ಸಾತಾನಿ ನಾರಾಯಣಯ್ಯನು ಕರಡಿಬೆಟ್ಟದ ಪೂಜಾರಿ. ಪ್ರತಿ ಭಾನುವಾರವು ಕರಡಿಬೆಟ್ಟದ ಆಘಜನೇಯನನ್ನು ಮೂರು - ನಾಲ್ಕು ಜನ ಮಾತನಾಡಿಸದುದೆ ಇಲ್ಲ . ' ಪೂಜಾರಿ ನಾರಾಯಣಯ್ಯನು ಗೂಟದಲ್ಲಿ ಪೂಜೆಗಾಗಿಯೇ ತಗಲು ಹಾಕಿರುವ ಬಿಳಿಯ ಬಟ್ಟೆಯನ್ನು ಉಟ್ಟುಕೊಂಡು ನೀರುತುಂಬಿದ

ಚೆಂಬನ್ನು ಕೈಯಲ್ಲಿ ಹಿಡಿದುಕೊಂಡು ಕರಡಿಗೆಯಲ್ಲಿ ಹೂವನ್ನು ತೆಗೆದುಕೊಂಡು ಬೀದಿಯುದ್ದಕ್ಕೂ ಘಂಟೆ ಅಲ್ಲಾಡಿಸುತ್ತಾ ದೇವಸ್ಥಾನಕ್ಕೆ ಹೋಗುತ್ತಾನೆ. ಬಂದವನೇ ನೀರನ್ನು ಕೈಯಲ್ಲಿ ತೆಗೆದುಕೊಂಡು ದೇವರಿಗೆ ಹಿಡಿದಿರುವ ಪಿಶಾಚಿಯಲ್ಲ ಓಡಿಹೋಗಬೇಕು. ದೇವರು ಬದ್ದು ತತ್ತರಿಸಬೇಕು . ಆರೀತಿ ದೇವರ ಮುಖಕ್ಕೆ ಅಪ್ಪಳಿಸುತ್ತಾನೆ. ದೇವರನ್ನು ಮಾತನಾಡಿಸುವವನು ಆವೇಳೆಗೆ ಬರುತ್ತಾನೆ. ಅವನಿಗೆ ಪ್ರಸಾದ ಬೇಕಾಗಿದೆ. ಯಾವುದೋ ಒಂದು ಕೆಲಸ ಮಾಡಿದರೆ ಒಳ್ಳೆಯದಾಗುತ್ತೊ ಅವನು ತಿಳಿಯಬೇಕಾಗಿದೆ. ಬಂದವನೇ ದೇವರಿಗೆ ಅಡ್ಡಬದ್ದು ' ಕೆಲಸ ವಾಗುವುದಿದ್ದರೆ ಬಲಗಡೆ ಕೊಡು , ಇಲ್ಲದಿದ್ದರೆ ಎಡಗಡೆಕೊಡು ' ಎನ್ನು ತ್ತಾನೆ. ಆದಿವಸ ನಾನು ಗುಂಡನು ಬೆಟ್ಟದ ಮೇಲಿನ ದೇಸ್ಥಾನಕ್ಕೆ ಹೋಗಿದ್ದೆವು . ದೇವರನ್ನು ಮಾತನಾಡಿಸುವವನು ಬರಲು ಹೂ ಮೊದಲು ಎಡಗಡೆಯಿಂದ ಕೆಳಕ್ಕೆ ಬದ್ದಿತು. ಭಕ್ತನು ಅಷ್ಟಕ್ಕೆ ಬಿಡಲಿಲ್ಲ. ದೇವರನ್ನು ಕುರಿತು " ಹೌದು ನನಗೆ ಗೊತ್ತಿದೆ ಇದು ಹೀಗಾಗುವುದೇ ಸರಿ ಬೇಕಾದಂತೆ ಕೋಣನನ್ನು ನೀರಿನಲ್ಲಿ ಕೆಡವಿ ಕುಣಿಸುತ್ತಾರೆ. ನಾನು ಬಲ್ಲ . ಎಡಗಡೆಕೊಡಬೇಡ , ಬೇಡ ನೋಡಿಕೋ ಬಲಗಡೆ ಕೊಡು ಹೂ ಹೂ " ಎಂದು ಚಪ್ಪಾಳೆಹೊಡೆದು ಕುಣಿದಾಡಿ ದೇವರನ್ನು ಹೆದರಿಸಿ ಬಲಗಡೆ ಹೂ ಕೆಡವಿಯೇ ಬಿಟ್ಟನು . ಒಬ್ಬನದಾಯಿತು ಸ್ವಲ್ಪಹೊತ್ತಿಗೆ ಮತ್ತೊಬ್ಬನು ಬಂದನು . ಅವನು ' ಕೆಲಸ ವಾಗುವುದಿದ್ದರೆ ಬಲಗಡೆ ಕೊಡು ಇಲ್ಲದಿದ್ದರೇ ಎಡಗಡೆ ' ಎಂದನು . ಸ್ವಲ್ಪ ಹೊತ್ತಿನೊಳಗಾಗಿ ಎಡಗಡೆ ಹೂ ಬದ್ದಿತು. ಭಕ್ತನು ಪೂಜಾರಿಯನ್ನು ನೋಡಿ ' ನೋಡಿ  ಸ್ವಾಮಿ ಕೆಲಸ ವಾಗೊಲ್ಲ ನನ್ನ ಅದೃಷ್ಟ ಎಂದನು . ಪೂಜಾರಿ ಬಹಳ ಬುದ್ಧಿವಂತ  ಭಕ್ತನಿಗೆ ಅನ್ಯಾಯವಾಗಿ ನಿರುತ್ಸಾಹವನ್ನು ಉಂಟುಮಾಡುವುದಕ್ಕೆ ಅವನಿಗೆ ಇಷ್ಟವಿರಲಿಲ್ಲ. ಅವನು ಭಕ್ತನಿಗೆ ' ಇದು ಮುಖ್ಯವಲ್ಲ ದೇವರ ಕೈಯಲ್ಲಿರುವ ಹೂ ಬೀಳಬೇಕು ' ಎಂದು ಹೇಳಿ ಅನಂತರ ದೇವರಿಗೆ ಈ ರೀತಿ ಉಪನ್ಯಾಸ ಮಾಡಿದ. " ಇದೆಲ್ಲಾ ಸರಿಯಾದುದಲ್ಲ ನೋಡು ಬಲಗಡೆ ಪ್ರಸಾದ ಕೊಟ್ಟುಬಿಡು. ಸುಮ್ಮನೆ ಹಳ್ಳಿದೇವರಂತೆ ಆವಬೇಡ . ಸುತ್ತಮುತ್ತಲ ಗ್ರಾಮಗಳಲ್ಲಿ ನಿನ್ನ ಹೆಸರು ಕೆಟ್ಟುಹೋಗುತ್ತೆ  " . ಹೂವು ಬಲಗಡೆಯಿಂದ ಬಿದ್ದಿತು ಬಂದವನಿಗೆ ತನ್ನ ಕಾರ್ಯದಲ್ಲಿ ಜಯವಾಗುವುದೆಂಬ ನಂಬಿಕೆಯು , ಹುರುಪು ಉಂಟಾದವು. ಗುಂಡನು ಬರುವಾಗ ದಾರಿಯುದ್ದಕ್ಕು ನಗುತ್ತಲೇ ಇದ್ದನು ಮನೆಗೆ ಹೊರಟುಬರುವಾಗ ' ನೀರಿನಿಂದ

ಅಟಿಕೊಂಡಿರುವ ಹೂವು ಅವನು ಪ್ರಸಾದ ಕೇಳಲಿ ಅಥವಾ ಕೇಳದೇ ಇರಲಿ ಬಿದ್ದೇ ಬೀಳುತ್ತದೆ ಎಂದನು." *

ಇಷ್ಟೇ ಅಲ್ಲದೆ ನಮ್ಮ ಊರಿನ ರಸಿಕರು ಕೃತಿಯಲ್ಲಿ ಒಬ್ಬಂಗಟಗರಾದ ಮಣೆಗಾರರ ಬಿಸಿನೀರಿನ ಸ್ನಾನದ ಪರದಾಟ , ಹರಿಸೇವೆಯ ಕಾರ್ಯದಲ್ಲಿ ಮಣೆಹಾಕುವುದು , 'ಹುಳಿಯನ್ನಕ್ಕಾಗಿಯೇ ದೇವಸ್ಥಾನಕ್ಕೆ ಬಂದೆಯಾ ' ಎಂದು ಕೇಳಿದ್ದಕ್ಕಾಗಿ ಶೀನಪ್ಪ ತನ್ನ ಜೊತೆಗಾರರೊಂದಿಗೆ ಸೇರಿ ಅವರಿಗೆ ಬುದ್ಧಿ ಕಲಿಸಿದ್ದು , ಊರಿನಲ್ಲಿ ಕಣ್ಣಿಗೆ ಬಿದ್ದ ಕತ್ತೆಗಳನ್ನೆಲ್ಲ ಕೃಷ್ಣಯ್ಯಂಗಾರರ ಎಮ್ಮೆ ಎಂದು ಹುಡುಗರು ಗೇಲಿಮಾಡಿ ನಗುವುದು , ಏಳನೇಯ ತರಗತಿಯಲ್ಲಿ ಆರುಸಲ ಫೇಲಾಗಿ ಏಳನೆಯ ಬಾರಿಗೆ ಪಾಸುಮಾಡಿಕೊಂಡು ಊರಿನಲ್ಲಿ ಪಾಣಿನಿ ವ್ಯಾಕರಣ ರತ್ನ ಎಂಬುದಾಗಿ ಪ್ರಸಿದ್ಧನಾಗಿದ್ದ ರಂಗೇಗೌಡನ ವಿಷಯ , ಜೋಡಿದಾರರ ಮಗ ಕಿಟ್ಟು ವರಪೂಜೆಯ ಸಂದರ್ಭದಲ್ಲಿ ದೇವರಿಗೆ ನಮಸ್ಕಾರಮಾಡುವ ಬದಲು ಅತ್ತೆಯ ಕಾಲಿಗೆ ನಮಸ್ಕಾರ ಮಾಡಿದ ಪ್ರಸಂಗ ಮುಂತಾದ ವರಣ ರಂಜಿತ ಸನ್ನಿವೇಶಗಳು ಹೇರಳವಾಗಿ ದೊರೆಯುತ್ತವೆ.

ಹೀಗೆ ಗೊರೂರರ ಇತರ ಕೃತಿಗಳಲ್ಲಿಯು ವಿನೋದ , ಹಾಸ್ಯೋಕ್ತಿಗಳು ತುಂಬಿತುಳುಕುತ್ತವೆ. ಇವುಗಳಲ್ಲಿ ಇರುವ ಉದ್ದೇಶ ನಗುತರಿಸುವುದರ ಜೊತೆಗೆ ಯಾವ ಸಂದರ್ಭದಲ್ಲಿಯೆ ಆಗಲಿ ಯಾರ ಮನಸ್ಸಿಗು ನೋವಾಗದಂತೆ ಜನರಲ್ಲಿರುವ ಓರೆಕೋರೆಗಳನ್ನು ನಗುನಗುತ್ತಲೇ ತಿದ್ದುವ ಕೆಲಸ . ಗೊರೂರರ ಈ ಸಜ್ಜನಿಕೆ , ನಗಿಸುವ ಜೀವನ ಕಲೆ ಅವರು ಹುಟ್ಟಿಬೆಳೆದ ಹಳ್ಳಿಯ ಜೀವನ ಅನುಭವದ ರಸಘಟ್ಟಗಳು . ಅವುಗಳನ್ನು ಅವರು ನಮ್ಮ ಮುಂದೆ ಬಿಚ್ಚಿಡುವ ರೀತಿ ಸರಳ , ಅದ್ಭುತ ಎರಡೂ ಹೌದು .

ಇವರ ಈ ಹಾಸ್ಯ ಪ್ರವೃತ್ತಿಯನ್ನು , ಸಾಹಿತ್ಯವನ್ನು ಕಂಡು ಕನ್ನಡದ ಪ್ರಮುಖ ಲೇಖಕರು ಪ್ರಶಂಸೆಯ ಮಾತುಗಳನ್ನು ನುಡಿದ್ದಿದ್ದಾರೆ, ಮೆಚ್ಚಿದ್ದಾರೆ.

---

* ನಮ್ಮ ಊರಿನ ರಸಿಕರು ಪು.ಸಂ.೧೯,೨೦

ಪ್ರಾಧಾನ ಗುರುದತ್ತರು ಗೊರೂರರ ಹಾಸ್ಯದ ಬಗೆಗೆ ಹೀಗೆ ಹೇಳಿದ್ದಾರೆ. " ಗೊರೂರರ ಹಾಸ್ಯ ಬರಹಗಳು ನಗೆಯನ್ನು ಉಕ್ಕಿಸುತ್ತವೆಯೇ ಹೊರತು ನೋವನ್ನು ಉಂಟುಮಾಡುವಂತವು ಅಲ್ಲ . ಲೇವಡಿಯಲ್ಲೇ ವಿರಮಿಸುವಂತವು ಅಲ್ಲ . ಅವು ನಿಷ್ಕಲ್ಮಷ ಹೃದಯದ ನಗೆ ಚಟಾಕಿಗಳು ಈ ದೃಷ್ಟಿಯಿಂದ ಅವು ವಿಶಿಷ್ಟವು ಹೌದು"* ಎಂದಿದ್ದಾರೆ.

ಗೊರೂರರ ಹಾಸ್ಯಬರಹದ ಬಗೆಗೆ ಡಿ.ವಿ.ಜಿ.ಯವರು ಇವರ ಪ್ರಬಂಧಗಳು ಅವರ ಮನಸ್ಸನ್ನು ಹೇಗೆ ಸೂರೆಗೊಳ್ಳುತ್ತಿದ್ದವು ಎಂಬುದನ್ನು ಒಂದೆಡೆ ಹೀಗೆಹೇಳಿಕೊಂಡಿದ್ದಾರೆ. " ನಿನ್ನೆ ರಾತ್ರಿ ನಿದ್ರೆ ಬರದುದರಿಂದ ಸುಮಾರು ಹನ್ನೆರಡು ಘಂಟೆಗೆ ದೀಪಹತ್ತಿಸಿಕೊಂಡು ನಿಮ್ಮ ಗರುಡ ಗಂಬದ ದಾಸಯ್ಯನನ್ನು ಓದಲು ಪ್ರಾರಂಭಿಸಿದೆ ನಿದ್ರೆಬರದಾಗ ಇದು ನನ್ನ ಪದ್ದತಿ. ಆಚಾರ ಕೆಟ್ಟರು ಆಕಾರ ಕೆಡಬಾರದು ಎಂಬುದನ್ನು ಓದುತ್ತಾ ತಡೆಯಲಾರದ ನಗುಬಂತು ಗಟ್ಟಿಯಾಗಿ ನಗುತ್ತಲೇ ಇದ್ದುಬಿಟ್ಟೆ ನಮ್ಮ ಹುಡುಗರು ಗಾಬರಿಯಿಂದ ಎದ್ದು ನೋಡಿದರು. ವಿಷಯ ತಿಳಿದ ನಂತರ ಅವರು ನಗತೊಡಗಿದರು. ಮಹಾನುಬಾವ ನೀವು ಕನ್ನಡ ಕಲಿತದ್ದು ಸಾರ್ಥವಾಯಿತು . ಹೀಗೆಯೇ ಬರೆಯುತ್ತಾ ಜನಮನದ ಕೊಳೆಯನ್ನು ಹೋಗಲಾಡಿಸುತ್ತೀರಿ ."*

ಬೇಂದ್ರೆಯವರು ಸಹ ಗೊರೂರರ ಈ ಗುಣವನ್ನು ಮುಕ್ತಕಂಠ ದಿಂದ ಹಾಡಿ ಹೊಗಳಿದ್ದಾರೆ- " ಒಬ್ಬ ಅರಸುಗಳೇ , ಹಜಾಮರೆ , ಹಾರುವರೆ , ತುರುಕರೆ, ದಾಸಯ್ಯಗಳೇ , ಬಯಲಾಟದವರೇ , ಸುಬೇದಾರರೇ , ಶಾನುಭೋಗರೇ , ಹೊಲೆಯರೇ ಇವರೆಲ್ಲರನ್ನೂ ಒಂದು ಮಾಲೆಯಲ್ಲಿ ಪೋಣಿಸುವ ವಿಕಟ ಕವಿತ್ವವು ಪ್ರಶಂಸನಿಯ ವೆಂದು ಯಾರುಹೇಳಲಿಕ್ಕಿಲ್ಲ ? ಹಾಸ್ಯವು ಸಾಮ್ಯವಾದಿ, ವೆಂಗ್ಯಸರಣಿಯ ಗಾದೆಮಾತಿನ ಲೇಹ್ಯಗಳು , ಕಟಕಿಯ ಮಾತಿನ ತಿರುಪಿನ ಕಷಾಯಗಳು , ಹಾಸ್ಯಗರ್ಭಿತ ಉಪಮೇ ದೃಷ್ಟಾಂತ ಪಾಚಕ ರೇಚಕಗಳು ಅತಿಶಯೋಕ್ತಿಯ ಗುಳಿಗೆಗಳು ತತ್ವದ ಬಸ್ಮಗಳು ಇವೆಲ್ಲವೂ ಸಾಮಾಜಿಕ ರುಗ್ಣತೆಯನ್ನು ಕಳೆಯುವ ಇವರ ಹಾಸ್ಯ ವೈದ್ಯಕದಲ್ಲಿ ಉಚಿತ ಪ್ರಯೋಜನಕಾರಿಯಾದುದನ್ನು ಅಡಿ ಗಡಿಗೆ ಕಂಡು ಹೀಗೆಯೇ ಈ ಕಲೆಯು

---

*ಗೊರೂರು ರಾಮಸ್ವಾಮಿ ಅಯ್ಯಂಗಾರ್ - ಪು.ಸಂ. ೩೫

*ಗೊರೂರು ರಾಮಸ್ವಾಮಿ ಅಯ್ಯಂಗಾರ್ - ಪು.ಸಂ. ೬೧

ನಮ್ಮ ಜನಮನದ ಕೊಳೆಯನ್ನು ಕಳೆದು ಬೆಳಗುವಂತಿರಲಿ ಎಂದು ಹರಸುವಂತಾಗುವುದು . ಗೊರೂರರ ಕಲೆಯು ಎಲ್ಲಿಂದಲೋ ರಫ್ತಾಗಿ ಬಂದ ಸೀಮೆಯ ಲಾಪಿನ ಸರಕಲ್ಲ . ಅದು ಜಾನಪದ ಜೀವನದಲ್ಲಿ ಹುದುಗಿದ್ದರೂ ಹರಿಯುತ್ತಿದ್ದ ಹಾಸ್ಯದ ತೊಳೆಯನ್ನು ಕಂಡುಹಿಡಿದು ಅದನ್ನು ಬಣ್ಣಿಸಬಲ್ಲ ಸ್ವಭಾವ ಸಿದ್ಧವಾದ ವಚನ ವೈಕರಿಯು ಅದಕ್ಕೆ ಎಂದಿಗೂ ಜಯವಿರಲಿ."*

ಈ ಮೇಲಿನ ವಿಚಾರಗಳನ್ನು ಪರಿಶೀಲಿಸಿದಾಗ ಗೊರೂರರ ಹಾಸ್ಯದ ಸ್ವರೂಪ, ಪರಿ , ಗುರಿಗಳು ವೇದ್ಯವಾಗುತ್ತವೆ . ಈ ಸೌರಾದ ಹಾಸ್ಯದ ಹಿಂದಿರುವ ವ್ಯಂಗ್ಯ ವಿಡಂಬನೆಗಳು ಗೋಚರಿಸುತ್ತವೆ.

* ಗೊರೂರು ರಾಮಸ್ವಾಮಿ ಅಯ್ಯಂಗಾರ್ - ಪ್ರದಾನ ಗುರುದತ್ತ , ಪುಟ ಸಂಖ್ಯೆ ೬೧.

# ಅಧ್ಯಾಯ -೮

## ಜನಪದ ಸಂಸ್ಕೃತಿಯ ಪರಿಕಲ್ಪನೆ

ಭಾರತ ಹಳ್ಳಿಗಳಿಂದ ಕೂಡಿರುವ ಕೃಷಿ ಪ್ರಧಾನ ರಾಷ್ಟ್ರವಾಗಿದೆ . ಮುಕ್ಕಾಲು ಪಾಲು ಜನತೆ ಕೃಷಿ ಕಾರ್ಯದಲ್ಲಿಯೇ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಕಾಯಕದಲ್ಲಿಯೇ ದೈವವನ್ನು ಕಾಣುವ ಸಾಧು ಸ್ವಭಾವದವರು ಹಳ್ಳಿಗರು. ಇವರು ತಮ್ಮದೇ ಆದ ಆಚಾರ - ವಿಚಾರ , ರೀತಿ- ನೀತಿ , ಸಂಪ್ರದಾಯ , ನಂಬಿಕೆಗಳನ್ನು ಅಳವಡಿಸಿಕೊಂಡು ಬಂದವರು . ಗೊರೂರರು ಸಹ ಗ್ರಾಮೀಣ ಪ್ರದೇಶದಲ್ಲಿಯೇ ಬೆಳೆದವರಾದ್ದರಿಂದ ಹಳ್ಳಿಯ ಜನರ ಜೀವನ ಪದ್ಧತಿಯನ್ನು ಕಣ್ಣಾರೆ ಕಂಡು, ಅನುಭವಿಸಿದಂತಹವರು. ಹಾಗಾಗಿಯೇ ಅವರು ಜಾನಪದ ಕ್ಷೇತ್ರದಲ್ಲಿ ಕೆಲಸ ಮಾಡಿದ ಅಗ್ರಗಣ್ಯರಲ್ಲಿ ಒಬ್ಬರಾಗಿದ್ದಾರೆ. ಜನಪದ ಸಾಹಿತ್ಯವನ್ನು ಸಂಗ್ರಹಿಸಿ , ಸಂಪಾದಿಸಿ , ಕೃತಿಗಳನ್ನು ಹೊರತಂದಿದ್ದಾರೆ.

ಭಾರತೀಯ ಸಂಸ್ಕೃತಿಯಲ್ಲಿ ಅಡಗಿರುವ ಪೌರಾಣಿಕ ಪ್ರಜ್ಞೆ ಜನಪದರ ಔಚಿತ್ಯ ಪ್ರಜ್ಞೆಗಳನ್ನು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಮಾಡಿದ ವಿಶೇಷ ಉಪನ್ಯಾಸದಲ್ಲಿ ಹೀಗೆ ತಿಳಿಸಿದ್ದಾರೆ. " ಭಾರತೀಯ ಸಂಸ್ಕೃತಿ ಸರ್ವಾಂಗ ಸಂಪೂರ್ಣವಾದುದಾರು ಇದು ಇಹಲೋಕದ ಸಾಧನೆಗಿಂತ ಪರಲೋಕದ ಸೌಖ್ಯಕ್ಕೆ ಹೆಚ್ಚುಪ್ರಾಮುಖ್ಯವನ್ನು ಕೊಡುವುದೆಂಬ ಭಾವನೆ ಭಾರತೀಯರಲ್ಲಿಯು, ಜಗತ್ತಿನ ಇತರರಲ್ಲಿಯು ಇಲ್ಲದಿಲ್ಲ . ಈ ಕಾರಣದಿಂದಲೇ ಇರಬಹುದು ನಮ್ಮ ಜನಪದರು ಇದು ತಮ್ಮನ್ನು ನಿಷ್ಕ್ರಿಯರನ್ನಾಗಿ ಮಾಡಬಹುದೆಂದು ಭಾವಿಸಿ ಭಾರತೀಯ ಆದ್ಯಾತ್ಮಿಕತೆಯ ಈ ಅಂಶಕ್ಕೆ ಅತಿ ಪ್ರಾಮುಖ್ಯತೆಯನ್ನು ಕೊಟ್ಟಂತೆ ತೋರುವುದಿಲ್ಲ . ಆ ಭಾವನೆಯನ್ನು ತಮ್ಮ ಜೀವನದ ಧ್ರುವತಾರೆಯನ್ನಾಗಿ ಮಾಡಿಕೊಳ್ಳಲಿಲ್ಲ. ಅದರ ಬದಲು ಅವರು ಈ ಜಗತ್ತಿನ ಜೀವನದಲ್ಲಿ ಸಮೃದ್ಧಿ , ಸೌಖ್ಯ , ಶಾಂತಿ, ತೃಪ್ತಿ, ಸಮರಸ, ಸೌಂದರ್ಯವನ್ನು - ಇದ್ದುದರಲ್ಲಿಯೇ ಸಾಧಿಸಿಕೊಳ್ಳಲು ಪ್ರತ್ನಿಸಿವರು . ಇದಕ್ಕೆ ಮುಖ್ಯ ಕಾರಣ ಪ್ರಕೃತಿಯೊಂದಿಗೆ - ಪ್ರಕೃತಿಯ ಅದಮ್ಯ , ಅನಿವಾರ್ಯ ಶಕ್ತಿಯೊಂದಿಗೆ ಚಿರಕಾಲದಿಂದ ಹೋರಾಡಿ ಅನುಭವದಿಂದ ಜೀವಿತದ ಮೌಲ್ಯವನ್ನು ಕಂಡುಕೊಂಡಿದ್ದುದು ಮತ್ತು ಜನಪದರ ಸಹಜ ಜನ್ಯವಾದ ವ್ಯವಹಾರ ಕುಶಲತೆ. "

" ಜನಪದ ಸಾಹಿತ್ಯ ಭಂಡಾರ ------------------- ನಮ್ಮ ಜೀವನದ ಆದಿಕಾಲದಿಂದ ಬೆಳೆದುಬಂದು, ಸಂಸ್ಕೃತಿ ಜೀವನದಿಂದ ಸಹ ತನಗೆ ಬೇಕಾದ ತಿರುಳನ್ನು ಆರಿಸಿ , ತನ್ನಲ್ಲಿ ಅಡಗಿಸಿಕೊಂಡು ಉಳಿದುದನ್ನು ತಿರಸ್ಕರಿಸಿ ಪರಿಪುಷ್ಟವಾಗಿ ಬೆಳೆದಿದೆ. ನಮ್ಮ ಜೀವನ ಯಾಂತ್ರಿಕ ನಾಗರೀಕತೆಯಿಂದ ಹೆಚ್ಚು ಹೆಚ್ಚು ಬರಡಾದಂತೆ ನಾವು ಜಾನಪದದ ಕಡೆಗೆ ಮತ್ತೆ ತಿರುಗುವುದರಿಂದ ಹೊಸ ಸ್ಫೂರ್ತಿ ಯನ್ನು ಹೊಂದ ಬಲ್ಲೆವು ಎಂಬುದಾಗಿ ಹೇಳಿದ್ದಾರೆ.

ಜನಪದರು ತಮ್ಮ ಜೀವನಕ್ಕು ಮೌಲ್ಯ ಆದರ್ಶಗಳಿಗೂ ಯಾವರೀತಿಯಲ್ಲಿ ಒಂದು ಬಿಡಿಸಲಾರದ ಬಂಧವನ್ನು ಏರ್ಪಡಿಸಿಕೊಂಡಿದ್ದರೆ ಎಂಬುದರ ಜೊತೆಗೆ ಗಾಂಧಿ ತತ್ವ- ಸಿದ್ದಾಂತಗಳು ಜನಪದರ ಜೀವನದಲ್ಲಿ ಹೇಗೆ ಅಳವಟ್ಟಿವೆ ಎಂಬುದನ್ನು ಅವರು ಈ ರೀತಿಯಾಗಿ ತಿಳಿಸಿದ್ದಾರೆ.

ಜೀವನವನ್ನು ಸಾರ್ಥಕವಾಗಿ ಸಾಧಿಸಲು , ಅತೀ ಕಡಿಮೆ ಸಂಖ್ಯೆಯ ಕೈಬೆರಳುಗಳಿಂದ ಎಣಿಸಬಹುದಾಷ್ಟೆ ನಿಯಮಗಳು , ದೇವರಲ್ಲಿ ನಂಬಿಕೆ, ಭಕ್ತಿ, ಪರೋಪಕಾರ , ಪ್ರಾಮಾಣಿಕ ದುಡಿಮೆ, ಅಹಿಂಸೆ , ಇವಿಷ್ಟೇ ಸಾಕೆಂದು ಮಹಾತ್ಮಗಾಂಧೀಜಿ ಹೇಳುತ್ತಾರೆ. ನಮ್ಮ ಜನಪದರು ಸಹ ದೈವದಲ್ಲಿ ನಂಬಿಕೆ ಕಾಯಕ ಸುಖವಾದ ಸಂಸಾರ ಜೀವನ , ಪರಸ್ಪರ ಸಹಾಯಕವಾದ ಸಾಮಾಜಿಕ ಜೀವನ ಈ ಮುಖ್ಯ ಅಂಶಗಳ ಮೇಲೆಯೇ ತಮ್ಮ ಜೀವನವನ್ನುರೂಪಿಸಿ ನಡೆಸುತ್ತಿದ್ದಾರೆ.

ಜನಪದ ಜೀವನವನ್ನು ಅದರ ಸಾಹಿತ್ಯ ಕಲೆ ಸಂಸ್ಕೃತಿಗಳಿಂದ ಬೇರೆಯಾಗಿ ನೋಡುವುದು ಸಾಧ್ಯವೇ ಇಲ್ಲ . ಈ ಸಾಹಿತ್ಯ ಜನ್ಮ ವೆತ್ತಿದುದು ಜನಜೀವನ ತುಂಬಾ ಸರಳವು , ಸಂಕೀರ್ಣವಲ್ಲದುದು ಕ್ಲಿಷ್ಟವಲ್ಲದುದು ಆಗಿದ್ದಾಗ ------------------- ಧರ್ಮದ ಮಾರ್ಗ ಸ್ಪಷ್ಟವಾಗಿದೆ. ಅದನ್ನೇ ಅನುಸರಿಸಬೇಕು. ಎಂದು ಜನ ದೃಢವಾಗಿ ನಂಬಿದ್ದಾಗ ; ---------------- ಸಮಷ್ಠಿ ಪ್ರಜ್ಞೆಯಂತೆ ಬಾಳುವುದೇ ಶ್ರೇಯಸ್ಕರವೆಂದು ಭಾವಿಸಿದ್ದಾಗ ------------ ಒಟ್ಟಿನಲ್ಲಿ ಮಾನವನ ಜೀವನದ ಪ್ರತಿಯೊಂದು ಅಂಶವು ಜನಪದ ಸಾಹಿತ್ಯದಲ್ಲಿ ಪ್ರಸ್ಥಾಪಿತವಾಗಿದೆ. ಒಂದು ಮಾತಿನಲ್ಲಿ ಹೇಳುವುದಾದರೆ ಬೆಳಿಗ್ಗೆ ಹಾಸಿಗೆಯಿಂದ ಏಳುವುದರಿಂದ ಹಿಡಿದು ರಾತ್ರಿ ಮಲಗುವ ವರೆಗೆ, ಹುಟ್ಟಿದುದರಿಂದ ಹಿಡಿದು ಸಾಯುವ ವರೆಗೆ ಮನುಷ್ಯ ಎದುರಿಸುವ ಎಲ್ಲಾ ಸಮಸ್ಯೆಗಳನ್ನು ಸರ್ವವ್ಯಾಪಿಯಾಗಿ ಜನಪದ ಸಾಹಿತ್ಯ

ಚರ್ಚಿಸುತ್ತದೆ. ಇದನ್ನು ಜನಪದೋಪನಿಷತ್ತು ಅಥವಾ ಜನಪದ ಜೀವನ ಧರ್ಮಶಾಸ್ತ್ರ ಸಂಸಾರ ವೇದಾಂತ ಎಂದು ಕರೆಯುವುದು ಸಹ ವಿಹಿತವಾಗಿದೆ.

ಹೀಗೆ ಜನಪದ ಸಾಹಿತ್ಯ ಸಂಸ್ಕೃತಿಗಳನ್ನು ಸೂಕ್ಷ್ಮವಾಗಿ ಗಮನಿಸಿ ಅಭ್ಯಸಿಸಿರುವ ಗೊರೂರರು ಜಾನಪದ ಪ್ರಜ್ಞೆಯನ್ನು ಜನಜೀವನಕ್ಕೆ ಅಳವಡಿಸಿಕೊಂಡು ಅವರು ನೀಡಿರುವ ಗ್ರಾಮ ಜೀವನದ ಹಲವಾರು ಚಿತ್ರಣಗಳು ಪ್ರಬಂಧ ರೂಪದಲ್ಲಿ ಹೊರಬಂದಿವೆ ಇದಕ್ಕೆ ಉತ್ತಮವಾದ ಉದಾಹರಣೆಗಳು ಎಂದರೆ ' ಬಂದಿಗಮ್ಮನ ಜಾತ್ರೆ ' ಮತ್ತು ' ಮಲ್ಲಿಗೆ ಹಳ್ಳಿಯಲ್ಲಿ ಬಯಲಾಟ ' ಪ್ರಬಂಧಗಳನ್ನು ನೋಡಬಹುದಾಗಿದೆ.

ಹಳ್ಳಿಗಳಲ್ಲಿ ಸಾಮಾನ್ಯವಾಗಿ ಎಲ್ಲಾ ಜನರು ಕೃಷಿಕಾರ್ಯಗಳಲ್ಲಿ ತೊಡಗಿಕೊಂಡಿರುತ್ತಾರೆ. ಸದಾ ಕಾಲ ಮೈಮುರಿದು ದುಡಿಯುವ ಇವರು ಸುಗ್ಗಿಯಕಾಲ ಕಳೆದ ನಂತರ ಹಬ್ಬ , ಜಾತ್ರೆ, ಉತ್ಸವ ಮುಂತಾದ ಉತ್ಸಾಹ ಕಾರ್ಯಕ್ರಮಗಳಿಂದ ಮನರಂಜನೆಯನ್ನು ಪಡೆದುಕೊಳ್ಳುತ್ತಾರೆ. ಅವುಗಳಲ್ಲಿ ಬಯಲಾಟ / ನಾಟಕಗಳಂತಹ ಕಾರ್ಯಕ್ರಮಗಳು ಸೇರಿಕೊಂಡಿರುತ್ತವೆ. ಹಳ್ಳಿಗರಿಗೆ ನಾಟಕಗಳಲ್ಲಿ ಆಸಕ್ತಿ ಹೆಚ್ಚು . ಹಳ್ಳಿಗಳಲ್ಲಿ ಕಲಿಯುವ ಬಯಲಾಟಗಳೆಲ್ಲ ಹೆಚ್ಚಾಗಿ ರಾಮಾಯಣ, ಮಹಾಭಾರತಕ್ಕೆ ಸಂಬಂಧಿಸಿದ ಕಥೆಗಳೇ ಆಗಿರುತ್ತವೆ. ನಾಟಕಗಳಲ್ಲಿ ಇಂತಹ ವ್ಯಕ್ತಿಗಳೇ ಭಾಗವಹಿಸಬೇಕು , ಇಂತಹ ಜಾತಿಗಳವರೇ ಬಾಗವಹಿಸಬೇಕು ಎಂಬಂತಹ ಕಡ್ಡಾಯವಿರುವುದಿಲ್ಲ. ಹಾಸನದ ಸಾಬಿಯೊಬ್ಬ ಆಂಜನೇಯನ ಪಾರ್ಟು ಮಾಡುತ್ತಿದ್ದುದನ್ನು ಮಲ್ಲಿಗೆ ಹಳ್ಳಿಯ ಬಯಲಾಟದಲ್ಲಿ ಹೀಗೆ ತಿಳಿಸಿದ್ದಾರೆ. " ಹಾಸನದಲ್ಲಿ ಒಬ್ಬ ಸಾಬಿ ಇದ್ದಾನೆ . ಮುಸಲ್ಮಾನರವನು ಅವನು ಸ್ಕೂಲಿನಲ್ಲಿ ವ್ಯಾಸಂಗ ಮಾಡಿದವನಲ್ಲ . ಆದರೆ ಕರ್ನಾಟಕ ಭಾಷೆಯನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದಾನೆ. ಅವನಿಗೆ ಹನುಮದ್ವಿಲಾಸ ಈಗಲೂ ಬಾಯಿಗೆ ಬರುತ್ತೆ . ಈ ಪ್ರಾಂತ್ಯದಲ್ಲೆಲ್ಲ ಅವನು ಆಂಜನೇಯ್ಯನ ಪಾರ್ಟನಲ್ಲಿ ಬಹಳ ಪ್ರಸಿದ್ದನಾಗಿದ್ದಾನೆ. ಪಂಚೆ ಉಟ್ಟುಕೊಂಡು ರುಮಾಲು ಸುತ್ತಿಕೊಂಡು , ನಾಮಹಾಕಿಕೊಂಡು ಅವನು ಬೀದಿಯಲ್ಲಿ ಹೊರಟರೆ ಸಾಬಿ ಎಂದೆ ಗೊತ್ತಾಗುವುದಿಲ್ಲ ಭಕ್ತರೆಲ್ಲ ಅವನಿಗೆ ನಮಸ್ಕಾರ ಮಾಡುತ್ತಾರೆ. ಆಂಜನೆಯನ ಪಾರ್ಟನಲ್ಲಿ ಅವನು ಎಷ್ಟೋ ಮರದ ಮೇಲೆ ಏರಿ ಕೆಳಕ್ಕೆ ಹಾರಿದ್ದ ."*

* ನಮ್ಮ ಊರಿನ ರಸಿಕರು ಪುಟ ಸಂಖ್ಯೆ ೫೦

ಪಾತ್ರಗಳಿಗೆ ತಕ್ಕಂತೆ ಪಾತ್ರಧಾರಿಗಳನ್ನು ಆರಿಸುವುದು ಒಂದು ಕಲೆ . ಇದು ಭಾಗವತರಿಗೆ ಸೇರಿದ್ದು . ಆದರೆ ಕೆಲವೊಮ್ಮೆ ಇದರಲ್ಲಿ ಅಭಾಸಗಳಾಗುವುದು ಉಂಟು ಒಂದೇ ಪಾತ್ರಕ್ಕೆ ಇಬ್ಬಬ್ಬರು ಪಾತ್ರಧಾರಿಗಳನ್ನು ಆರಿಸುವುದು ಇರುತ್ತದೆ. ಇವು ಕೆಲವು ಬಾರಿ ಅಭಾಸಗಳಾಗಿ ಕಂಡುಬಂದರೂ ಹಳ್ಳಿಗರ ಉತ್ಸಾಹಕ್ಕೇನು ಕಡಿಮೆ ಇರುತ್ತಿರಲಿಲ್ಲ. ಇಂತಹ ಕೆಲವು ಸಂದರ್ಭಗಳನನು ಗೊರೂರರು ತಮ್ಮ ಕೃತಿಗಳಲ್ಲಿ ಸೆರೆಹಿಡಿದಿದ್ದಾರೆ. " ನಮ್ಮ ಊರಿನಲ್ಲಿ ಬಯಲಾಟವೆಂದರೆ ಸುತ್ತ ಮುತ್ತ ಹನ್ನೆರಡು ಹಳ್ಳಿಗಳ ಜನರು ಸೇರುತ್ತಾರೆ. ಸಾವಿರಾರು ಜನರೆದುರಿಗೆ ಪಾತ್ರವನ್ನು ವಹಿಸತಕ್ಕ ನಮ್ಮ ಊರ ಆಟಗಾರರನ್ನು ಕಂಡು , ಅವರ ಹೆಂಡತಿಯರಿಗೂ ತಾಯಂದಿರಿಗೂ ಬಹಳ ಹೆಮ್ಮೆ ಆದಿವಸ ಆಟಗಾರರಿಗೆ ಹೊಲದಲ್ಲಿ ಬಹಳ ಕೆಲಸವಿಲ್ಲ ಮನೆಯವರೆಲ್ಲ ಒಂದೇ ಮನಸ್ಸಿನಿಂದ ಅಂದು ಅವರಿಗೆ ವಿರಾಮಕೊಡುತ್ತಾರೆ. ಆಟದ ದಿವಸ ಕೊಳ್ಳುವುದಕ್ಕೆ ಒಬ್ಬರಿಗೂ ನಮ್ಮ ಊರಿನಲ್ಲಿ ಹಾಲು , ಮೊಸರು ಸಿಕ್ಕುವುದಿಲ್ಲ. ಮನೆಯ ಹೆಂಗಸರು ಪಾತ್ರಗಳನ್ನು ವಹಿಸುವವರಿಗೆ ಆ ದಿವಸ ಹಾಲು ಮೊಸರನ್ನು ಮೀಸಲಿಟ್ಟುಬಿಡುತ್ತಾರೆ. ಪ್ರತಿಯೊಬ್ಬ ಹೆಂಡತಿಯು ಪ್ರತಿಯೊಬ್ಬ ತಾಯಿಯು " ಈ ದಿವಸ ನನ್ನ ಮಗ ಚಂದ್ರಮತಿ ಆಡ್ತಾನೆ ಇವತ್ತಯ ನನ್ನ ಗಂಡ ಹರಿಶ್ಚಂದ್ರನ್ನ ಕುಣಿತಾನೆ " ಎಂದು ಮುಂತಾಗಿ ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ." *



ಇಂತಹ ಈ ಬಯಲಾಟಗಳಲ್ಲಿ ಅನೌಚಿತ್ಯದ ಸಂಗತಿಗಳು ಸಾಕಷ್ಟು ಕಂಡುಬರುತ್ತವೆ. ಒಮ್ಮೆ ಮಾಮೂಲಾಗಿ ಸುಗ್ರೀವನ ಪಾತ್ರವನ್ನು ವಹಿಸುತ್ತಿದ್ದ ಮಾದಸಿಗೆ ರಾಮನ ಪಾತ್ರವನ್ನು ಕುಣಿಯುವ ಅವಕಾಶ ದೊರೆಯುತ್ತದೆ. ಇದನ್ನು ಆತ ಅಭಿನಯಿಸಿದ್ದು ಹೀಗೆ . " ಕಥೆಯು ರಾಮನು ಸೀತಾ ವಿರಹದ ದುಃಖವನ್ನು ಲಕ್ಷ್ಮಣನೊಡನೆ ಹೇಳಿಕೊಳ್ಳಲು ನಿಂತ ಸ್ಥಳದಿಂದ ಪ್ರಾರಂಭವಾಯಿತು. ---------------- ರಂಗಸ್ಥಳಕ್ಕೆ ಬಂದ ಕೂಡಲೇ ರಾಮನು ತನ್ನ ದುಃಖವನ್ನು ಅಭಿನಯಿಸಬೇಕೆಂಬ ವಿಷಯವನ್ನೇ ಮರೆತು ತನ್ನ ಜೀವಮಾನದಲ್ಲಿ ಒಂದು ಸಲ ತನಗೆ ರಾಮನ ವೇಷ ಸಿಕ್ಕಿತಲ್ಲಾ ಎಂಬ ಸಂತೋಷದಿಂದ ಕುಣಿಯಲು ಆರಂಭಿಸಿದನು. ಆಟಗಾರರೆಲ್ಲ " ರಾಮನ ವೇಷ ಮಾದ ಕುಣಿದು ಕೆಡಿಸಿಬಿಡುತ್ತಾನೆ " ಎಂಬುದಾಗಿ ಮೊದಲೇ ಹೇಳಿದ್ದರು ಆ ಅಪವಾದವನ್ನು ಹೋಗಲಾಡಿಸಬೇಕೆಂದು ರಾಮನ ವೇಷಧಾರಿಗೆ

* ನಮ್ಮ ಊರಿನ ರಸಿಕರು ಪುಟ ಸಂಖ್ಯೆ ೫೦

ಆತುರವಿದ್ದಿತು. ಆದುದರಿಂದ ತನ್ನ ಮೊದಲನೆ ಪ್ರವೇಶ ದಲ್ಲಿಯೇ ಜನರನ್ನು ದಂಗ್ ಮಾಡಿ ಭೇಷ್ ಅನ್ನಿಸಿಕೊಳ್ಳಬೇಕೆಂದು ರಾಮನಿಗೆ ಹಟ ಹತ್ತಿತು ಅವನು ಹೆಂಡವನ್ನು ಕುಡಿದ ಕಪಿಯಂತೆ ಡರ್ ಎಂದು ಕಿರುಚುತ್ತಾ ಪದೇ ಪದೇ ತಾನೇ ಭಲೇ ಭಲೇ ಎಂದು ಕೊಳ್ಳುತ್ತಾ ನೆಲಕ್ಕೆ ಹಾಕಿದ್ದ ಹಲಗೆಯು ಬರಿದು ಚೂರಾಗುತ್ತದೆಯೋ ಎನ್ನುವಂತೆ ಕುಣಿದನು.

ಅದರಲ್ಲಿಯು ಹಳ್ಳಿಗರ ಯಾವರೀತಿ ಸಂತೋಷ ಪಡುತ್ತಿದ್ದರೆಂದರೆ " ರಾಮನ ಕುಣಿತವು ಅಸಂಬದ್ಧವಾಗಿದ್ದರು ದುಃಖದಲ್ಲಿರುವ ರಾಮ ರಬ್ಬರ್ ಚೆಂಡು ಪುಟವಿಟ್ಟಂತೆ ನೆಗೆಯುವುವದು ಸರಿಯಲ್ಲವೆಂದು ಎಲ್ಲರಿಗೂ ಹೊತ್ತಾಗಿದ್ದರೂ ರಾಮನ ಆ ಕುಣಿತ ಧೀಂತಕ ಧಾಂ ಕಂಡು ಪ್ರೇಕ್ಷಕರೇ ರಾಮನ ಇಚ್ಚೆಯಂತೆ ಡಂಗ್ ಆಗಿ ಭಲೇ ಭಲೇ ಎಂದು ಕುಣಿದರು ."*

ಕೆಲವೊಮ್ಮೆ ಒಂದೇ ಪಾತ್ರವನ್ನು ಇಬ್ಬಬ್ಬರಿಗೆ ಹಂಚುತಿದ್ದುದರ ಅನೌಚಿತ್ಯ ಹಾಗೂ ಅನಿವಾರ್ಯತೆಗಳನ್ನು ಹೀಗೆ ತಿಳಿಸಿದ್ದಾರೆ " ಒಂದೊಂದು ವೇಳೆ ಒಂದೇ ಪಾತ್ರಕ್ಕಾಗಿ ಅನೇಕ ವೇಳೆ ಪೈಪೋಟಿ ಯುಂಟಾಗುತ್ತಿದ್ದಿತು. ಆಗ ಭಾಗವತರು ಒಂ ದೇ ಪಾತ್ರವನ್ನು ಇಬ್ಬಬ್ಬರಿಗೆ ಹಂಚುತ್ತಿದ್ದರು ಒಂದು ಸಲ ಧನಸ್ಸನ್ನು ಭಂಗಿಸಿದ ರಾಮನೇ ಬೇರೆ ರಾವಣನನ್ನು ಕೊಂದು ಲಂಕೆಯಿಂದ ಸೀತೆಯನ್ನು ಬಿಡುಗಡೆಮಾಡಿಕೊಂಡು ಬಂದ ರಾಮನೇ ಬೇರೆ. ದಶರಥನ ಪಾತ್ರ ವಿಭಾಗದಲ್ಲಿಯು ಹೀಗೆಯೇ ಆಯಿತು . ರಾಮನ ಪಟ್ಟಾಭಿಷೇಕದ ಸಿದ್ದತೆಯವರೆಗೆ ಆಡಿದ ದಶರಥ ಮುದುಕನಾಗಿದ್ದ, ರಾಮನು ಕಾಡಿಗೆ ಹೋದ ದುಃಖ ದಿಂದ ನೊಂದು ಕೊನೆಯಲ್ಲಿ ಮರಣಹೊಂದಿದ ದಶರಥ ಯುವಕನಾಗಿದ್ದ ."*

ಬಯಲಾಟದಲ್ಲಿ ಕಂಡುಬರುವ ಸಾದೃಶ್ಯ - ವೇದೃಷ್ಯಗಳ ವಿಚಾರ ಹಾಸ್ಯವಿನೋದಗಳು ಈ ಬಗೆಯವಾದರೆ ಜಾತ್ರೆ , ರಥೋತ್ಸವಗಳ ಸಂಭ್ರಮ , ಸಡಗರ , ನಂಬಿಕೆಗಳು ಮತ್ತೊಂದ.ು ರೀತಿಯಲ್ಲಿ ನಮ್ಮ ಗಮನವನ್ನು ಸೆಳೆಯುತ್ತವೆ . ಲೇಖಕರು ಅವುಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಮೊದಲೇ ಹೇಳಿದಂತೆ ಜಾತ್ರೆಗಳು ಆರಂಭವಾಗುವುದೇ ಬಿಡುವಿನ ವೇಳೆಯಲ್ಲಿ ಗೊರೂರರು ಬಂದಿಗಮ್ಮನ ಜಾತ್ರೆಯ ವಿಷಯವನ್ನು ಹೀಗೆ ಆರಂಭಿಸುತ್ತಾರೆ. " ಸುಗ್ಗಿಯ ಕಣವು ಪೂರೈಸಿದ ಮೇಲೆ ರೈತರಿಗೆ ಬಿಡುವು. ತಾವು ಬೆಳೆದ ಭತ್ತ , ರಾಗಿ ಮತ್ತು ಇತರ ಕಿರಾಣಿಗಳನ್ನು ಕಣಜಕ್ಕೆ ಹಾಕಿಕೊಂಡು ರೈತರು

* ನಮ್ಮ ಊರಿನ ರಸಿಕರು ಪುಟ ಸಂಖ್ಯೆ ೧೧೨.೧೧೫

ಸ್ವಾಭಾವಿಕವಾಗಿ ಸ್ವಲ್ಪ ನೆಮ್ಮದಿಯಿಂದ ಇರುತ್ತಾರೆ. ಈ ವಿರಾಮ ಕಾಲದಲ್ಲಿ ನಂಟರು ಇಷ್ಟರನ್ನು ರೈತರು ಬರಮಾಡಿಕೊಳ್ಳುತ್ತಾರೆ. ತಾವು ಅವರ ಮನೆಗಳಿಗೆ ಹೋಗಿ , ಅವರ ಕಷ್ಟ ಸುಖಗಳಲ್ಲಿ ಭಾಗಿಯಾಗುತ್ತಾರೆ. ಜಾತ್ರೆ, ತೇರು, ರಥೋತ್ಸವ , ಬಂಡಿಹಬ್ಬ ಇವುಗಳಲೆಲ್ಲ ಸಕ್ರಿಯವಾಗಿ ಭಾಗವಹಿಸುತ್ತಾರೆ. ಜನವರಿಯಿಂದ ಭರಣಿ ಮಳೆ ಬೀಳುವವರೆಗೆ ಸುಮಾರು ಮೂರು ತಿಂಗಳ ಕಾಲ ಈ ಜಾತ್ರೆಗಳಲ್ಲಾ ಆಚರಿಸಲ್ಪಡುತ್ತವೆ. ರೈತರು ತಮ್ಮ ಊರಿನಲ್ಲಿ ಆಗುವ ಜಾತ್ರೆ , ಉತ್ಸವ , ಹಬ್ಬಗಳ ಜೊತೆಗೆ ತಮ್ಮ ಸುತ್ತಲ ಊರುಗಳ ಜಾತ್ರೆಗಳಿಗೂ ಹೋಗುತ್ತಾರೆ. ಕೆಲವರು ಕೆಲವು ದೇವರುಗಳಲ್ಲಿ ವಿಶೇಷ ರೀತಿಯ ಭಕ್ತಿಯನಿಟ್ಟುಕೊಂಡು ಪ್ರತಿವರುಷವು ತಪ್ಪದೇ ಆ ಜಾತ್ರೆಗಳಿಗೆ ಹೋಗಿಯೇ ಹೋಗುತ್ತಾರೆ.

## ಬಿಂದಿಗಮ್ಮನ ಜಾತ್ರೆ

ಗೊರೂರು ಯೋಗಾನರಸಿಂಹ , ಬೇಲೂರು ಚೆನ್ನಕೇಶವ, ಮಾವಿನಕೆರೆ ರಂಗ ಸ್ವಾಮಿ , ಕರಿಘಟ್ಟದ ಶ್ರೀನಿವಾಸ, ಬೈಲಹಳ್ಳಿ ಜನಾರ್ದನ , ತುಲಿಕಲ್ಲು ವೆಂಕಟರಮಣ ಸ್ವಾಮಿ , ಹೇಮಗಿರಿರಂಗ, ಕುಂದೂರು ಆಂಜನೇಯ , ನುಗ್ಗೇನಹಳ್ಳಿಯ ಲಕ್ಷ್ಮೀ ನರಸಿಂಹ , ಅರಕಲಗೂಡು ಅರ್ಕೇಶ್ವರ, ಶಾಂತಿಗ್ರಾಮದ ಕೇಶವದೇವರು, ಭರತೂರು ಬಿಂದಿಗಮ್ಮ ಈ ಜಾತ್ರೆಗಳೆಲ್ಲಾ ಗೊರೂರು ಮತ್ತು ಗೊರೂರಿನ ಸುತ್ತಮುತ್ತಲ ಹಳ್ಳಿಗಳ ರೈತರನ್ನು ವಿಶೇಷವಾಗಿ ಕಾಣಬಹುದು. ಇವುಗಳಲ್ಲಿ ಭರತೂರು ಬಂದಿಗಮ್ಮನ ಜಾತ್ರೆ ಹೆಚ್ಚು ಪ್ರಸಿದ್ಧಿಯನ್ನು ಪಡೆದದ್ದು. ಗೊರೂರಿನಿಂದ ಸುಮಾರು ಹತ್ತು ಮೈಲಿ ದೂರದಲ್ಲಿ ಪಶ್ಚಿಮಕ್ಕೆ ರಂಗನಬೆಟ್ಟವೆಂಬ ಬೆಟ್ಟವಿದೆ. ಇಲ್ಲಿಂದ ಒಂದೂವರೆ ಮೈಲು ಆಚೆಗೆ ಕೊಡಗಿನ ಗಡಿ ಸಿಕ್ಕುತ್ತದೆ. ರಂಗನ ಬೆಟ್ಟದ ಸುತ್ತಲ ೫೦-೬೦ ಹಳ್ಳಿಯವರು ಮತ್ತು ಕೊಡಗು ಸೀಮೆಯ ಕೆಲವರು ರಂಗನ ಬೆಟ್ಟದ ರಂಗದೇವರ ಒಕ್ಕಲುಗಳು ರಂಗನಬೆಟ್ಟದಿಂದ ೩ - ೩ ೧/೨ ಮೈಲಿ ದೂರದಲ್ಲಿ ಭರತೂರು ಎಂಬ ಗ್ರಾಮವಿದೆ. ಇದು ಈ ಸುತ್ತಮುತ್ತಲಿನ ಸ್ವಲ್ಪ ಪ್ರಸಿದ್ಧವಾದ ಹಳ್ಳಿ. ಈ ಗ್ರಾಮದ ರೈತರೆಲ್ಲರೂ ರಂಗ ದೇವರ ಒಕ್ಕಲು. ಪ್ರತಿಯೊಂದು ದೇವರಿನ ಒಕ್ಕಲಿನವರು ಸಾಮಾನ್ಯವಾಗಿ ತಮ್ಮ ಮಕ್ಕಳಿಗೆ ಆ ದೇವರ ಹೆಸರನ್ನೇ ಇಡುತ್ತಾರೆ. ಅದೇ ರೀತಿ ರಂಗದೇವರ ಒಕ್ಕಲಿನವರು ಗಂಡುಮಗುವಿಗೆ "ರಂಗ" ಎಂತಲೂ ಹೆಣ್ಣು ಮಗುವಿಗೆ " ಬಂದಿ" ಎಂತಲೂ ಹೆಸರಿಡುತ್ತಾರೆ.

ರಂಗಸ್ವಾಮಿ ದೇವರು ನಮ್ಮ ದೇಶದಲ್ಲಿ ಅಪರೂಪವಲ್ಲ. ಬಿಳಿಗಿರಿರಂಗ, ಹೇಮಗಿರಿ ರಂಗ, ಮಾವಿನಕೆರೆ ರಂಗ, ಶಿವನಸಮುದ್ರದ ರಂಗ, ಅಳಗಿರಿ ರಂಗ, ಶ್ರೀರಂಗಪಟ್ಟಣದ ರಂಗ, ಶ್ರೀರಂಗದ ರಂಗ ಮತ್ತು ಭರತೂರು ರಂಗ ಹೀಗೆ ಎಲ್ಲೆಲ್ಲಿಯೂ.ರಂಗದೇತೆಗಳು ಇದ್ದಾರೆ. ಆದರೆ ಭರತೂರಿನ ರಂಗ ಪ್ರಸಿದ್ಧಿ . ಇಲ್ಲಿ ಈ ಜಾತ್ರೆಗೂ ರಂಗನ ಬೆಟ್ಟದ ಜಾತ್ರೆ ಎಂದೇ ಹೆಸರು . ಆದರೆ ಈ ಜಾತ್ರೆ ಇನ್ನೂ ಹೆಚ್ಚು ಪ್ರಸಿದ್ದವಾದ ಹೆಸರು ಬಂದಿಗಮ್ಮನ ಜಾತ್ರೆ ಅಥವಾ ಬಂದಿಗೆಯ ಜಾತ್ರೆ ಎಂದು

ಮಾಘ ಶುಕ್ಲ ಪೌರ್ಣಿಮೆ ಅಥವಾ ಅದಕ್ಕೆ ಒಂದು ದಿನ ಮುಂಚೆ ಅಥವಾ ಆಚೆಗೆ -ಅಂತೂ ಶನಿವಾರ - ಈ ಜಾತ್ರೆ ಭರತೂರಿನಲ್ಲಿ ನಡೆಯುತ್ತದೆ.ರಂಗನ ಬೆಟ್ಟದ ಮೇಲೆ ಇರುವ ದೇವಸ್ಥಾನದಿಂದ ,

ಸಂಕ್ರಾತಿಯಾದ ಮಾರನೆಯ ದಿನ , ಅಂದರೆ ಜನವರಿ ೧೫ ನೇ ತಾರೀಖು ದೇವರ ಉತ್ಸವವನ್ನು ಹೊರಡಿಸುತ್ತಾರೆ. ಈ ಉತ್ಸವದ ರಂಗ ದೇವರು ಒಂಟಿ. ಅವರಿಗೆ ಆಚೆ ಈಚೆ ಇತರ ಉತ್ಸವ ದೇವರುಗಳಿಗೆ ಇರುವಂತೆ ಇಬ್ಬರು ಪತ್ನಿಯರಾದ ಶ್ರೀದೇವಿ , ಭೂದೇವಿ ಅಥವಾ ನೀಳಾದೇವಿಯರು ಇಲ್ಲ. ಉತ್ಸವದೇವರು ಕುದುರೆಯೇರಿಯೇ ಇರುತ್ತಾನೆ. ರಂಗನ ಬೆಟ್ಟ, ಕಾಡಿನ ನಡುವೆ ಇರುವುದರಿಂದಲೂ ರಂಗದೇವರು ಬೇಟೆಗಾರ ದೇವರು.

ರಂಗನ ತೇಜಿಗೆ ಹೊಂಬಾಳೆ ವಡ್ಯಾಣ
ದುಂಡು ಮಲ್ಲಿಗೆ ಮೊಕರಂಬ | ಬೇಟ್ಗಾರ
ರಂಗನೇರ್ಯಾನೆ ಹೊಸ ತೇಜಿ||

ಬೆಟ್ಟದ ರಂಗ ನಾಲ್ಕು ಜನರ ಹೆಗಲ ಅಡ್ಡೆಯ ಮೇಲೆ ಸರಾಗವಾಗಿ ಹೋಗುವಂತೆ ಕಾಣುವುದೇ ಇಲ್ಲ. ರಂಗನ ಮೆರವಣಿಗೆಯಲ್ಲಿ , ಯಾವಾಗಲೂ ವೇಗ ಹೆಚ್ಚು ಆ ದೇವರನ್ನು ಸಾಗಿಸಿಕೊಂಡು ಹೋಗುವವರೂ ವೇಗವಾಗಿ ಓಡುತ್ತಾರೆ.

ಹಳ್ಳಾದ ಮೇಲೊಂದು ಹುಲ್ಲೆ ಹೆಜ್ಜೆ ಯ ಕಂಡೆ
ಹುಲ್ಯಲ್ಲ ಕಾಣೋ ಮರಿಗುದುರೆ | ರಂಗಯ್ಯ
ಹುಲ್ಲೆ ಬೇಟ್ಯಾಡಿ ಬರ್‍ತಾನೆ||

ಬೆಟ್ಟದ ರಂಗನ ಕುದುರೆಯ ವೇಗ , ಹುಲ್ಲೆಯ ವೇಗಕ್ಕಿಂತ ಹೆಚ್ಚು. ಹೀಗೆ ಸಂಕ್ರಾತಿಯಾದ ಮರುದಿನ ಬೆಟ್ಟದಿಂದ ಇಳಿದು ಪ್ರತಿದಿನ ಒಂದೊಂದು ಹಳ್ಳಿಗೆ ಹೋಗಿ ಆ ರಾತ್ರಿ ಅಲ್ಲಿ ತಂಗಿ ಭಕ್ತಾದಿಗಳಿಂದ ಪೂಜೆಗೊಳ್ಳುತ್ತಾನೆ. ದೇವರು ಹಳ್ಳಿಗೆ ಹೋದ ದಿನ ಅಲ್ಲಿಯವರಿಗೆಲ್ಲ ದೊಡ್ಡ ಹಬ್ಬ. ಎಲ್ಲರೂ ಬಂದು ದೇವರಿಗೆ ಹಣ್ಣು ಕಾಯಿ ಅರ್ಪಿಸುತ್ತಾರೆ. ಅಂದು ಹಳ್ಳಿಯವರು ಶುಚಿಯಾಗಿ ಸ್ನಾನ ಮಾಡಿ ಊರನ್ನು ಶುದ್ಧ ಮಾಡಿ ಮನೆಯ ಬಾಗಿಲಿನಲ್ಲಿಯೂ ರಂಗೋಲೆಯಿಕ್ಕಿ ಊರ ಮುಂದೆ ತೋರಣಗಳನ್ನು ಕಟ್ಟುತ್ತಾರೆ.

ಹಳ್ಳದ ನೀರಾಗೆ ತೆಳ್ಳನ್ನ ಕಲ್ಲಾಗೆ
ಜಲ್ಲಿ ಸಿಕ್ಕವ ಬಿಸಿಲೀಗೆ | ರಂಗಯ್ನ
ವಲ್ಲಿ ನಾಣ್ಯಾಗಿ ಮಡಿಯಾಗೆ

ಪ್ರತಿಯೊಬ್ಬರೂ ತಮ್ಮ ತಮ್ಮ ವಸ್ತ್ರಗಳನ್ನೆಲ್ಲ ಮಡಿಮಾಡಿಕೊಳ್ಳುತ್ತಾರೆ. ಮಾಂಸಾಹಾರಿಗಳು ಆ ದಿನ ಮಾಂಸವನ್ನು ತಿನ್ನುವುದಿಲ್ಲ. ಕುಡುಕರು ಹೆಂಡವನ್ನು ಮುಟ್ಟುವುದಿಲ್ಲ. ಅನೇಕ ದಿನಗಳಿಂದ ಇರುವ ವ್ಯಾಜ್ಯಗಳು ಅಂದು ಪರಿಹಾರವನ್ನು ಕಂಡುಕೊಳ್ಳುತ್ತವೆ. ಎರಡು ಪಕ್ಷದವರೂ ಬಂದು, ನಿಜವನ್ನು ದೇವರ ಮುಂದೆ ಹೇಳಿ ತಮ್ಮ ಭಿನ್ನಾಭಿಪ್ರಾಯಗಳನ್ನು ಹೋಗಲಾಡಿಸಿಕೊಳ್ಳುತ್ತಾರೆ.

ಒಂದು ಹಳ್ಳಿಯಿಂದ ಮತ್ತೊಂದು ಹಳ್ಳಿಗೆ ದೇವರು ಹೊರಡುವಾಗ, ಆಯಾ ಹಳ್ಳಿಯವರು ಅಡ್ಡೆ ಹೊತ್ತು ದೇವರನ್ನು ಮುಂದಲ ಹಳ್ಳಿಗೆ ಸಾಗಿಸಬೇಕು. ಪ್ರತಿ ಯೊಂದು ಊರಿನ ವಾದ್ಯದವರೂ ಓಲಗ , ತಮಟೆ , ಕೊಂಬು, ಕಹಳೆ, ತುತ್ತೂರಿ, ಭಾಂಕಿ, ಕುಣಿಮಿಣಿ, ಹರೆ ಮುಂತಾದ ಸಮಸ್ತ ವಾದ್ಯಗಳೊಂದಿಗೆ ದೇವರನ್ನು ಸಾಗಿಸಿ ಬರುತ್ತಾರೆ. ಹೀಗೆ ಊರಿನಿಂದ ಊರಿಗೆ ಹೋಗಿ ತಂಗಿದರೂ ಸ್ವಾಭಾವಿಕವಾಗಿ ಬೇಟೆ ಗಾರನಾದ ರಂಗದೇವರಿಗೆ ವೇಗ ಹೆಚ್ಚು . ಅಡ್ಡೆ ಹೊರಲು ಸಾಧಾರಣವಾಗಿ ಗಟ್ಟಿ ಮುಟ್ಟಾದ ಯುವಕರೇ ಸೇರುತ್ತಾರೆ. ಆದಷ್ಟು ಬೇಗ ದೇವರನ್ನು ಓಡಿಸಿಕೊಂಡು ಹೋಗಿ ಮುಂದಲ ಊರಿಗೆ ಸೇರಿಸಿಬಿಡಬೇಕು ಎಂಬುದು ಅವರ ಗುರಿಯಾಗಿರುತ್ತದೆ. " ಹಿಂದಲ ಊರಿನವರು ಒಂದೂವರೆ ಮೈಲಿಗೆ ಇಷ್ಟು ಕಾಲ ತೆಗೆದುಕೊಂಡರು, ನಾವು ಇನ್ನೂ ಸ್ವಲ್ಪ ಕಡಿಮೆ ಕಾಲವನ್ನು ತೆಗೆದುಕೊಳ್ಳಬೇಕು " ಎಂಬುದು ಅವರ ಆಸೆ ' ಜೊತೆಗೆ ವಾದ್ಯದವರು , ಛತ್ರಿ, ಪಂಜಿನವ, ಪೂಜಾರಿ ಎಲ್ಲರಿಗೂ ಅನುಕೂಲವಾಗುವಂತಹ ವೇಗಲ್ಲಿ ಮುಂದುವರಿಯಬೇಕು. ಇಂತಹ ರಭಸದಲ್ಲಿ ಬರುವ ದೇವರಾದರೂ " ರಂಗ" ಬಡವರ ದೇವರು ತಾನೆ ಪ್ರತಿ ಊರಿಗೂ ಹೋಗಿ ಜನರಿಗೆ ಸೇವೆ ಕೊಡುತ್ತಾನೆ. ಚಿನ್ನ , ಬೆಳ್ಳಿ, ನಗ, ನಾಣ್ಯ ಬೆಲೆಬಾಳುವ ವಸ್ತ್ರ ಇದಾವುದನ್ನೂ ಆತ ಕಾಣಿಕೆ ಕೇಳುವುದಿಲ್ಲ. ಕಾಡಿನ ಬೆಟ್ಟದ ಮೇಲಿರುವ ದೇವರಾದುದರಿಂದ ಆತನಿಗೆ ಧನಿಕರು ಕೊಡುವ ಬೆಲೆಬಾಳುವ ಕಾಣಿಕೆಗಳಲ್ಲಿ ಆಸಕ್ತಿಯಿಲ್ಲ. ಮನೆ ಬಾಗಿಲಿಗೆ ಬಂದು ಒಂದು ರಾತ್ರಿ ಒಂದು ಊರಿನಲ್ಲಿ ತಂಗುವುದರಿಂದ ಆತನನ್ನು ನೋಡಲು ನೂಕು ನುಗ್ಗಲೂ ಇಲ್ಲ.

ರಂಗನ್ನ ನೋಡೋಕೆ ರೇಕು ಮಾಣಿಕವೇಕೆ
ಅಂಗಯ್ಯ ತುಂಬ ಹಣವೇಕೆ | ಬೇಟ್ಗಾರ
ಸಿಂಗರದ ರಂಗನ್ನ ನೋಡಾಕೆ ||

'ರಂಗ'ದೇವರು ರಂಗೋಲೆ, ಮಂಗಳಾರತಿ, ದೀಪ ಇವುಗಳಿಂದಲೇ ಸಂತುಷ್ಟನಾಗುತ್ತಾನೆ. ಅವನು ರಾತ್ರಿ ತಂಗಿದ ಹಳ್ಳಿಯಲ್ಲಿ ದೀಪೋತ್ಸವವಾಗುತ್ತದೆ. ಹೀಗೆ ರಂಗದೇವರು, ದಿನಕ್ಕೆ ಒಂದು ಊರಿನಂತೆ ಒಂದು ತಿಂಗಳು ಮೂರು ದಿನ ತಿರುಗಿ, ನಾಳೆ ರಂಗನ ಬೆಟ್ಟದ ಜಾತ್ರೆ ಎನ್ನುವಾಗ, ಮತ್ತೆ ಬಂದು ಬೆಟ್ಟದ ಮೇಲಿರುವ ದೇವಾಸ್ಥಾನದಲ್ಲಿ ಸೇರುತ್ತಾನೆ.

ರಂಗದೇವರು " ರಂಗನ ಬೆಟ್ಟದ ಜಾತ್ರೆ"ಗೆ ಆ ಹೆಸರು ಇದ್ದರೂ ಅದು ಪ್ರಸಿದ್ಧವಾಗಿರುವುದು " ಬಿಂದಿಗಮ್ಮನ ಜಾತ್ರೆ" ಎಂದೇ. ಜಾತ್ರೆಯ ದಿನ ಬೆಳಗ್ಗೆ ರಂಗದೇವರು ಕುದುರೆಯ ಮೇಲೇರಿ, ರಂಗನಬೆಟ್ಟದಿಂದ ಸುಮಾರು ನಾಲ್ಕು ಮೈಲಿ ದೂರವಿರುವ ಭರತೂರ ಮುಂದಲ ಹೇಮಾವತೀ ನದಿಯ ತೀರದ ತೋಫಿಗೆ ಬರುತ್ತಾನೆ. ಈ ತೋಪಿನಲ್ಲಿ ಬಿಂದಿಗಮ್ಮನ ದೇವಸ್ಥಾನವಿದೆ. ಈ ದೇವಸ್ಥಾನವೆಂಬುದು ಮತ್ತೇನೂ ಅಲ್ಲ. ಬರಿಯ ನಾಲ್ಕು ಕಂಬಗಳ ಒಂದು ಕಲ್ಲು ಮಂಟಪ. ಅದರ ಮಧ್ಯದಲ್ಲಿ ಸುಮಾರು ಒಂದು ಅಡಿ ಚೌಕದ ಒಂದು ಕಲ್ಲನ್ನು, ನೆಲದಿಂದ ಒಂದು ಅಡಿ ಎತ್ತರದಲ್ಲಿ ಹೂಳಿದ್ದಾರೆ. ಇದೇ " ಬಿಂದಿಗಮ್ಮ ದೇವರ ಪೀಠ", ಬಿಂದಿಗಮ್ಮ ರಂಗದೇವರ ಹೆಂಡತಿ ಲಕ್ಷ್ಮಿಗೆ ಬಿಂದಿಗಮ್ಮ ಎಂದು ಹೆಸರು. ನಿಜವಾದ ಬಿಂದಿಗಮ್ಮ ಆ ಕಲ್ಲು ಅಲ್ಲ.

ಅದರ ಮೇಲೆ ಸುಮಾರು ೧೫ ಅಂಗುಲ ಅಗಲದ ಒಂದು ತಟ್ಟೆಯಲ್ಲಿ, ನೀರು ತುಂಬಿದ ಸಣ್ಣ ಗಡಿಗೆಯನ್ನು ಇಟ್ಟಿದ್ದಾರೆ. ಆ ಗಡಿಗೆಯ ಮೇಲುಗಡೆ ೨-೩ ಅಂಗುಲ ಅಗಲದ ಒಂದು ಛತ್ರಿ ಸಹ ಇರುತ್ತದೆ. ತಟ್ಟೆಯಲ್ಲಿರುವ ಗಡಿಗೆಯ ಸುತ್ತ ಹೂವು ತುಳಸಿ ಇವುಗಳನ್ನು ಹಾಕಿ ಗಡಿಗೆ ಓಲಾಡದಂತೆ ಮಾಡಿರುತ್ತಾರೆ. ಮಂಟಪದಲ್ಲಿರುವ ಕಲ್ಲಿನ ಮೇಲೆ ಆ ಗಡಿಗೆ ಸಹಿತವಾದ ತಟ್ಟೆಯನ್ನಿಟ್ಟು, ಅದಕ್ಕೆ ಜಾತ್ರೆಯ ದಿನ ಪೂಜೆ ಮಾಡುತ್ತಾರೆ. ಮುಂದುಗಡೆ ಒಂದೂವರೆ ಮಾರು ದೂರದಲ್ಲೇ ರಂಗದೇವರು ಕುದುರೆಯ ಮೇಲೇ ಕುಳಿತಿದ್ದರೂ ಇಂದು ಮಟ್ಟಿಗೆ ಅವನ ಮುಂದೆ ಅಷ್ಟು ಜನಸಂದಣಿ ಇರುವುದಿಲ್ಲ. " ರಂಗನ ಬೆಟ್ಟದ ಜಾತ್ರೆ" ಎಂದು ಹೆಸರಿದ್ದರೂ ಜನರು ಬಿಂದಿಗಮ್ಮನ ಸುತ್ತ ನೆರೆದು ಆ ದೇವಿಗೆ ಪೂಜೆ ಮಾಡಿಸುವುದರಲ್ಲಿ ಆಸಕ್ತರಾಗಿರುತ್ತರೆ. ಬಿಂದಿಗಮ್ಮ ರಂಗನಬೆಟ್ಟದ ದೇವಸ್ಥಾನವನ್ನು ಬಿಟ್ಟು ಹೊರಗೆ ಬರುವುದು ವರ್ಷಕ್ಕೆ ಒಂದೇ ದಿನ, ಅದೂ ಜಾತ್ರೆಯ ದಿನ ಮಾತ್ರ. ಆಕೆಗೆ ಪೂಜೆಯೂ ಇದೊಂದೇ ದಿನ. ಆದರೆ ಬೆಟ್ಟದ ಮೇಲೆ

ಇರುವ ಮೂಲದೇವರನ್ನು ( ರಂಗದೇವರು) ಯಾವಾಗ ಬೇಕಾದರೂ ಪೂಜೆ ಮಾಡಬಹುದು. ಸ್ವತಃ ರಂಗದೇವರೇ ತನ್ನ ಪತ್ನಿಯ ವೈಭವವನ್ನು ನೋಡಲೆಂದು, ತಾನೇ ಊರೂರು ತಿರುಗಿ, ಭಕ್ತರನ್ನೆಲ್ಲಾ ಕರೆದುಕೊಂಡು ಬಂದಂತೆ ಕಾಣುತ್ತದೆ.

ಸಾಧಾರಣವಾಗಿ ಎಲ್ಲ ಜಾತ್ರೆಗಳಲ್ಲಿಯೂ ಸ್ತ್ರೀಯರ ಓಡಾಟವೇ ಹೆಚ್ಚಾದರೂ, ಬಿಂದಿಗಮ್ಮನ ಜಾತ್ರೆಯಲ್ಲಂತೂ ಅವರೇ ಸರ್ವವ್ಯಾಪಿಗಳಾಗರುತ್ತಾರೆ. ಈ ಪೂಜಾ ಕಾರ್ಯಗಳೆಲ್ಲಾ ಸುಮಾರು ರಾತ್ರಿ ಹತ್ತು ಗಂಟೆಯವರೆಗೆ ನಡೆಯುತ್ತಿರುತ್ತದೆ. ಸಂಜೆಯಾಗುತ್ತಾ ಬಂದಂತೆ, ಜನಸಂಖ್ಯೆ ಅಧಿಕವಾಗುತ್ತಾ ಬರುತ್ತದೆ. ತೋಪು ಸಾಕಾಗದೆ ಜನರು ಗದ್ದೆ ಬಯಲುಗಳಲ್ಲಿಯೂ ತುಂಬುತ್ತಾರೆ. ಬಿಂದಿಗಮ್ಮನನ್ನು ಪೂಜಾರಿ, ಜೋಳು ತಲೆಯ ಮೇಲೆ ಹೊತ್ತು, ಕೈಬಿಟ್ಟು ಓಡುತ್ತಾ ಹೋಗಿ, ದಾರಿಯಲ್ಲಿ ಹನ್ನೆರಡು ಕಡೆ ಉದ್ದಕ್ಕೂ ಸಾಷ್ಟಾಂಗ ನಮಸ್ಕಾರ ಮಾಡಿ ಎಲ್ಲಿಯೂ ತಟ್ಟೆಯನ್ನೂ ಬಿಂದಿಗೆಯನ್ನೂ ಹಿಡಿದುಕೊಳ್ಳದೆ ರಂಗನ ಬೆಟ್ಟದ ಮೇಲಿನ ರಂಗಸ್ವಾಮಿ ದೇವಾಲಯವನ್ನು ಸೇರುತ್ತಾನೆ.

ಹಳ್ಳಿಗರು ಪೂಜಾರಿ ಹಾಗೆ ಓಡಿಬರಬೇಕಾದರೆ ಎಷ್ಟು ಭಕ್ತಿಯಿಂದ ಇರಬೇಕು ಎಂಬುದನ್ನು ಊಹಿಸುತ್ತಾರೆ. ಪೂಜಾರಿ ಏಳು ದಿನಗಳಿಂದ ಪ್ರತಿ ದಿನವೂ ತಲೆ, ಗಡ್ಡವನ್ನು ಪೂರ್ಣವಾಗಿ ಕ್ಷೌರಮಾಡಿಸಿಕೊಳ್ಳುತ್ತಾ ಜಾತ್ರೆ ಐದು ದಿನಗಳಿವೆ ಎನ್ನುವಾಗಲಿಂದ ಒಂದೇ ಹೊತ್ತು ಮಿತವಾಗಿ ಊಟ ಮಾಡುತ್ತಾನೆ. ಜಾತ್ರೆಯ ಮೊದಲ ದಿನ ಪೂಜಾರಿಯು ಬರಿಯ ಹಣ್ಣು ಹಾಲು ಮಾತ್ರ ಸೇವಿಸುತ್ತಾನೆ. ಜಾತ್ರೆಯ ದಿನ ಅವನಿಗೆ ಪೂರ್ಣ ಉಪವಾಸ. ಅಂದು ಅವನು ಎಲ್ಲರ ಎದುರಿಗೂ ನದಿಯ ತೀರದಲ್ಲಿಯೇ ಕುಳಿತು ಪೂರ್ತ ತಲೆಕ್ಷೌರ ಮಾಡಿಸಿಕೊಂಡು ಸ್ನಾನಮಾಡಿ, ಅವನಿಗಾಗಿ ಸಿದ್ದ ಮಾಡಿಟ್ಟಿರುವ ಚಪ್ಪರದಲ್ಲಿ ಕುಳಿತು ದೇವರ ಧ್ಯಾನ ಮಾಡುತ್ತಾನೆ. ಜಾತ್ರೆಗೆ ಬಂದಿರುವ ಭಕ್ತರೆಲ್ಲ ಅವನು ಕುಳಿತಲ್ಲಿಗೆ ಹೋಗಿ ನಮಸ್ಕಾರ ಮಾಡಿ, ಕೆಲವರು ಅವನ ಕೈಯಿಂದ ನಾಮವನ್ನು ಇಕ್ಕಿಸಿಕೊಂಡು ಬಿಂದಿಗಮ್ಮನ ಸೇವೆಗೆ ಹೋಗುತ್ತಾರೆ.

ಸೂರ್ಯ ಮುಳುಗಿದ ನಂತರ ವಾತಾವರಣಕ್ಕೆ ಕಾವು ಏರಿ ಜನರಲ್ಲಿ ಸಂಭ್ರಮವೂ, ಸಂತಸವೂ ಹೆಚ್ಚುತ್ತದೆ. ನದಿಯತೀರದಲ್ಲಿ ಕುಳಿತಿರುವ ಪೂಜಾರಿ, ಬಿಂದಿಗಮ್ಮನಿರುವ ಮಂಟಪಕ್ಕೆ ಬರುತ್ತಾನೆ. ಕಚ್ಚೆ ಪಂಚೆಯುಟ್ಟು ಅವನು ಒಂದು ಶಾಲನ್ನು ಹೊದೆದಿರುತ್ತಾನೆ. ತಲೆಗೆ ಒಂದು ಜರಿಯ

ಪಂಚೆಯನ್ನು ಕಟ್ಟಿರುತ್ತಾನೆ. ಇದು ಆ ಸಂದರ್ಭಕ್ಕೆ ಅವನಿಗೆ ನಿಗದಿಯಾಗಿರುವ ಉಡುಪು. ಅವನನ್ನೇ ನಿರೀಕ್ಷಿಸುತ್ತಾ ಆ ಅಸಂಖ್ಯಾತ ಜನಸ್ತೋಮ ಬಿಂದಿಗಮ್ಮನ ಸುತ್ತ ಸೇರಿರುತ್ತದೆ. ಪೂಜಾರಿಯು ಜನರ ಗುಂಪನ್ನು ನಿಧಾನವಾಗಿ ಬಿಡಿಸಿಕೊಂಡು ಬಂದು, ಬಿಂದಿಗಮ್ಮನ ಮುಂದೆ ನಿಂತು ಪೂಜೆ ಮಾಡುತ್ತಾನೆ. ಪೂಜಾರಿ ಬಿಂದಿಗಮ್ಮನಿಗೆ ಮಂಗಳಾರತಿ ಮಾಡಿದ ನಂತರ, ಹಾರ ಮುಂತಾದ ಸ್ಥಳದ ಮರ್ಯಾದೆಗಳಾಗುತ್ತವೆ. ಸ್ಥಳದ ಹಿರಿಯರೊಬ್ಬರು. ಬಿಂದಿಗಮ್ಮನನ್ನು ( ತಟ್ಟೆಯಲ್ಲಿರುವ ನೀರು ತುಂಬಿದ ಗಡಿಗೆ) ಎರಡು ಕೈಗಳಲ್ಲಿಯೂ ಎತ್ತಿಕೊಂಡು ಪೂಜಾರಿಯ ಕೈಗೆ ಕೊಡುತ್ತಾರೆ. ವಾದ್ಯ, ತುತ್ತೂರಿ, ಜನತೆಯ ಅಸಂಖ್ಯಾತ ಕಂಠಗಳಿಂದ ಹೊರಡುವ " ಗೋವಿಂದ-ಗೋವಿಂದ" ಎಂಬ ಘೋಷಣೆಗಳೊಡನೆ, ಪೂಜಾರಿಯು ಬಿಂದಿಗಮ್ಮನನ್ನು ನಿಧಾನವಾಗಿ ತಲೆಯ ಮೇಲೆ ಎತ್ತಿಕೊಳ್ಳುತ್ತಾನೆ.

ತಟ್ಟೆ ತಲೆಯನ್ನು ಸಮಿಪಿಸಿದಂತೆ ಅವನ ಶಿಷ್ಯ, ಅವನ ತಲೆಯ ಮೇಲಿನ ಜರಿ ಪಂಚೆಯನ್ನು ಹೊದೆದಿರುವ ಶಾಲನ್ನೂ ತೆಗೆದುಬಿಡುತ್ತಾನೆ. ಈಗ ನೋಡಿದರೆ ಪೂಜಾರಿಯು ಸೊಂಟಕ್ಕೆ ಒಂದು ಕಚ್ಚೆ ಪಂಚೆ ಕಟ್ಟಿ ಅದರ ಮತ್ತೊಂದು ಭಾಗವನ್ನೇ ಎದೆಗೂ ಸುತ್ತಿಕೊಂಡು , ಹೆಗಲ ಬಳಿ ಒಂದು ಗಂಟನ್ನು ಹಾಕಿರುವುದು ಗೊತ್ತಾಗುತ್ತದೆ.

ಪೂಜಾರಿಯು ತಟ್ಟೆಯನ್ನು ಎರಡು ಕೈಗಳಿಂದಲೂ ಹಿಡಿದು ತನ್ನ ಬೋಳು ತಲೆಯ ಮೇಲೆ ಸಮತೂಕದಲ್ಲಿ ಇಟ್ಟುಕೊಳ್ಳುತ್ತಾನೆ. ಮುಂದುಗಡೆ ಅಡ್ಡೆಕಾರರು ರಂಗದೇವರನ್ನು ಹೊತ್ತುಕೊಂಡು ಹೊರಡುತ್ತಾರೆ. ಈಗ ರಂಗದೇವರಿಗೆ ಓಲಗವೂ ಇಲ್ಲ, ಪಂಜೂ ಇಲ್ಲ. ಅಡ್ಡೆ ಹೊತ್ತವರು ಮುಂದುಗಡೆ ನಾಗಾಲೋಟದಲ್ಲಿ ಓಡುತ್ತಾರೆ. ಹಿಂದುಗಡೆ ಬಿಂದಿಗಮ್ಮನನ್ನು ಹೊತ್ತ ಪೂಜಾರಿ, ಅಷ್ಟೇ ವೇಗದಲ್ಲಿ ಹೊರಡುತ್ತಾನೆ. ಅವನ ಮುಂದೆ ಪಂಜನ್ನು ತೋರಿಸುತ್ತಾ ಎರಡು ಕಡೆಯೂ ಒಬ್ಬೊಬ್ಬ ಪಂಜಿನವನು ಇರುತ್ತಾನೆ. ಇನ್ನೊಂದು ಮೂರು ಮಾರು ಹೋಗುವುದರೊಳಗೆ, ಎರಡು ಕೈಗಳನ್ನು ಪೂರ್ತ ಬಿಟ್ಟು, ತಲೆಯ ಮೇಲೆ ಬಿಂದಿಗೆಯಿರುವುದು ತನಗೆ ಗೊತ್ತೇ ಇಲ್ಲವೋ ಎಂಬಂತೆ ಓಡುತ್ತಾನೆ. ಅವನು ಎರಡು ಕೈಗಳಲ್ಲೂ ಒಂದೊಂದು ಚೂರು ದವನವನ್ನು ಹಿಡಿದಿರುತ್ತಾನೆ. ಹೀಗೆ ಓಡುತ್ತಿರುವ ಪೂಜಾರಿಯು " ಬಿಂದಿಕಲ್ಲು" ಎಂಬ ಸ್ಥಳದ ವರೆವಿಗೆ ಬರುವವರೆಗೆ ಮಾತ್ರ ಜ್ಞಾನವಿರುವುದೆಂದೂ ಮುಂದೆ, ಅವನ ಮೇಲೆ ದೇವರು ಬರುವುದೆಂದೂ ಹೇಳುತ್ತಾರೆ.

ತಲೆಯ ಮೇಲೆ ತಟ್ಟೆಯಲ್ಲಿ ನೀರು ತುಂಬಿದ ಕಲಶವನ್ನು ಹೊತ್ತುಕೊಂಡು,ಕೈಬಿಟ್ಟು ಜಿಂಕೆಯ ಮರಿಯಂತೆ ಓಡುತ್ತಿರುವ ಅವನ ಜತೆ ಓಡಲು ಯಾರಿಗೂ ಸಾಧ್ಯವಾಗುವುದಿಲ್ಲ. ಅವನ ವೇಗಕ್ಕೆ ಸ್ವಲ್ಪ ಹತೋಟಿಯನ್ನುಂಟುಮಾಡುವವರು ಪಂಜಿನವರು ಮಾತ್ರ.

ಹೀಗೆ ಮುಂದುಗಡೆ 'ರಂಗದೇವರು' ನಾಲ್ಕು ಜನರ ಹೆಗಲಿನ ಮೇಲೆಯೂ ಹಿಂದುಗಡೆ ಬಿಂದಿಗಮ್ಮನ ಪೂಜಾರಿಯ ಬೋಳು ತಲೆಯ ಮೇಲೆಯೂ, ಪಂಜಿನವರೂ ಓಡುತ್ತಾ ಹೋಗಿ ರಂಗನ ಬೆಟ್ಟದ ದೇವಾಲಯವನ್ನು ಸೇರುವುದೇ " ಬಿಂದಿಗಮ್ಮನ ಜಾತ್ರೆ." ಈಗ ಜನ ಪೂಜಾರಿಯನ್ನೇ ಬಿಂದಿಗಮ್ಮ ಎಂದು ಭಾವಿಸುತ್ತಾರೆ." ಬಿಂದಿಗಮ್ಮ ಬಂದಳು" "ಬಿಂದಿಗೆ-ಬಂದಿತು" ಎಂದು ಹೇಳುವುದೇ ವಾಡಿಕೆ.

ಭರತೂರಿನಿಂದ ರಂಗನ ಬೆಟ್ಟದ ಮೇಲಕ್ಕೆ ಸುಮಾರು ನಾಲ್ಕಾರು ಮೈಲಿಗಳ ಕಾಡುದಾರಿ. ಆ ದಾರಿಯಲ್ಲಿ ಉದ್ದಕ್ಕೂ ೧೨ ಹಳ್ಳಿಗಳಿವೆ. ಆ ಹಳ್ಳಿಗಳು ಬಿಂದಿಗಮ್ಮನ ಮಾರ್ಗದಲ್ಲಿ ಇಲ್ಲ. ಆದರೆ ಆ ಮಾರ್ಗದ ನೇರದಲ್ಲಿ ಬಲಕ್ಕೆ ಮತ್ತು ಎಡಕ್ಕೆ ೩-೪ ಮೈಲಿಗಳ ದೂರದಲ್ಲಿವೆ. ಆಯಾ ಹಳ್ಳಿಯವರು ತಮ್ಮ ತಮ್ಮ ಹಳ್ಳಿಗಳ ನೇರದಲ್ಲಿ ಬಿಂದಿಗಮ್ಮನ ಮಾರ್ಗದಲ್ಲಿ ಒಂದೊಂದು ಕಲ್ಲು ತೋರಣವನ್ನು ನಟ್ಟಿದ್ದಾರೆ. ಆಚೆ ಈಚೆ ಎತ್ತರವಾದ ಕಲ್ಲುಕಂಬಗಳು, ಅದರ ಮೇಲೊಂದು ಕಲ್ಲಿನ ತೊಲೆ, ಇದೇ ಕಲ್ಲುತೋರಣ. ಇವು ಶಾಶ್ವತವಾದ ತೋರಣಗಳು, ಇವುಗಳನ್ನುನೆಟ್ಟು ೧೦೦-೧೫೦ ವರುಷಗಳಾಗಿರಬಹುದು. ಬಿಂದಿಗಮ್ಮನ ಜಾತ್ರೆಯ ದಿನ ಆ ಕಲ್ಲು ತೋರಣಗಳಿಗೆ ಆಯಾ ಊರಿನವರು ಬಾಳೆಯ ಕಂಬ, ಮಾವಿನೆಲೆ, ಹೂವುಗಳನ್ನು ಹೊಸದಾಗಿ ಕಟ್ಟಿ ಅಲಂಕಾರ ಮಾಡುತ್ತಾರೆ.

ಆ ಹನ್ನೆರಡು ತೋರಣಗಳಲ್ಲಿಯೂ ಆಯಾ ಗ್ರಮದವರು ಬಿಂದಿಗಮ್ಮನ ಸ್ವಾಗತಕ್ಕಾಗಿ, ಅಕ್ಕಿಯಲ್ಲಿ ಹಸೆಯನ್ನು ಬರೆದು, ಅದರ ಮೇಲೆ ಎಲೆ, ಅಡಿಕೆ ಮತ್ತು ಒಂದು ಪಾವಲಿಯನ್ನು ಇಟ್ಟು, ಬಿಂದಿಗಮ್ಮನಿಗಾಗಿ ಕಾಯುತ್ತಿರುತ್ತಾರೆ. ಬಿಂದಿಗಮ್ಮ ಈ ಹನ್ನೆರಡು ತೋರಣಗಳನ್ನೂ ದಾಟಬೇಕು. ಬಿಂದಿಗಮ್ಮನ ಮುಂದೆ ಹೋಗುತ್ತಿರುವ ರಂಗದೇವರನ್ನು ಹೊತ್ತಿರುವ ಅಡ್ಡೆಕಾರರು, ದೇವರನ್ನು ಮುಂಚೆಯೇ ಹೊತ್ತುಕೊಂಡು ಬಂದು, ತೋರಣದ ಬಳಿ ಇಳಿಸಿ, ಬಿಂದಿಗಮ್ಮನಿಗಾಗಿ

ಕಾಯುತ್ತಿರುತ್ತಾರೆ. ಬಿಂದಿಗಮ್ಮ ಅಲ್ಲಿಗೆ ಬರಬೇಕು. ಬಂದು ರಂಗದೇವರಿಗೆ ನಮಸ್ಕಾರ ಮಾಡುವಾಗಲೂ ತಟ್ಟೆ ಮುತ್ತು ನೀರು ತುಂಬಿದ ಕಲಶ (ಬಿಂದಿಗೆ) ತಲೆಯ ಮೇಲೆಯೆ ಇರುತ್ತದೆ. ಅದನ್ನು ಪೂಜಾರಿಯ ಕೈಯಿಂದ ಮುಟ್ಟುವಂತೆಯೂ ಇಲ್ಲ. ಅದೇನಾದರೂ ಕಳಕ್ಕೆ ಬಿದ್ದರೆ ಅಥವಾ ಪೂಜಾರಿ ಅದನ್ನು ಕೈಯಿಂದ ಹಿಡಿದುಕೊಂಡರೆ, ಪ್ರತಿ ತೋರಣದ ಹತ್ತಿರದಲ್ಲಿಯೂ ಇರುವ ಬಿಚ್ಚುಕತ್ತಿ ಕಾವಲುಗಾರರು ಅವನ ತಲೆಯನ್ನು ತತ್ತರಿಸಿಹಾಕುತ್ತರೆಂದು ಹೇಳುತ್ತಾರೆ. ಆದರೆ ಪೂಜಾರಿಗೆ ಇದಾವುದರ ಪರಿವೆಯೇ ಇರುವುದಿಲ್ಲ. ಅವನ ಆವೇಶ ಹಾಗಾಗಿರುತ್ತದೆ. ಅವನು ಹೊರಟ ಸ್ಥಳದಲ್ಲಿ ತಟ್ಟೆಯ ಕೈಯನ್ನು ಬಿಟ್ಟರೆ ಮತ್ತೆ ತಟ್ಟೆಯನ್ನು ಮುಟ್ಟುವುದೇ ಇಲ್ಲ. ಆತ ತೋರಣದಲ್ಲಿ ರಂಗದೇವರಿಗೆ ದೀರ್ಘವಾಗಿ ಸಾಷ್ಟಾಂಗವಾಗಿ ನಮಸ್ಕರಿಸುತ್ತಾನೆ. ದೇಹ ಕೋಲಿನಂತೆ ಭೂಮಿಯ ಮೇಲೆ ಬೀಳುತ್ತದೆ. ಬರಿ ಮಂಡಿಯೂರಿ ನಮಸ್ಕರಿಸುವುದಿಲ್ಲ. ತಟ್ಟೆಯಾಗಲಿ. ಅದರಲ್ಲಿರುವ ಕಲಶ ( ಬಿಂದಿಗೆ)ಯಾಗಲೀ ಅಲುಗಾಡುವುದಿಲ್ಲ. ತೋರಣಗಳ ಬಳಿ ಸುತ್ತಮುತ್ತಲ ಎಲ್ಲ ಹಳ್ಳಿಗಳ ಜನರೂ ಸೇರುವುದರಿಂದ ಒಂದು ಸಡಗರದ ವಾತಾವರಣವಿರುತ್ತದೆ. ಪ್ರತಿಯೊಂದು ತೋರಣದ ಬಳಿಯೂ ಆಯಾ ಹಳ್ಳಿಯವರು ಮುಂದೆ ಮುಂದೆ ಹೋಗುತ್ತಿರುವ ರಂಗದೇವರ ಅಡ್ಡೆಯನ್ನು ಬದಲಾಯಿಸಿಕೊಂಡು ಮುಂದಲ ತೋರಣದವರೆಗೂ ಸಾಗಿಸಿಕೊಂಡು ಹೋಗುವುದರಿಂದ ಅವರ ವೇಗ ಹೆಚ್ಚುತ್ತಲೇ ಹೋಗುತ್ತದೆ. ಆದರೆ ಬಿಂದಿಗಮ್ಮ ಅವರಿಗೆ ಸೋಲುವುದೇ ಇಲ್ಲ. ಒಂದು ತೋರಣದಿಂದ ಮತ್ತೊಂದು ತೋರಣಕ್ಕೆ ಹೋಗಲು ಹೊಸ ಅಡ್ಡೆಕಾರರು ಎಷ್ಟು ಹೊತ್ತನ್ನು ತೆಗೆದುಕೊಳ್ಳುತ್ತಾರೆಯೋ ಬಿಂದಿಗಮ್ಮನೂ ಅಷ್ಟೇ ಹೊತ್ತನ್ನೂ ತೆಗೆದುಕೊಳ್ಳುತ್ತಾಳೆ. ಅಡ್ಡೆಕಾರರು ಎರಡು ನಿಮಿಷ ಮುಂಚೆ, ತೋರಣವನ್ನು ತಲುಪಿ, ಅಲ್ಲಿ ರಂಗದೇವರ ಅಡ್ಡೆಯನ್ನು ನೆಲದ ಮೇಲೆ ಇಡುತ್ತಾರೆ. ಅವರ ಹಿಂದೆಯೇ ಬಿಂದಿಗಮ್ಮ ಬಂದು ದೇವರಿಗೆ ನಮಸ್ಕಾರ ಮಾಡಿ ಹಣವನ್ನು ಮುಟ್ಟುತ್ತಾಳೆ. ಹನ್ನೆರಡು ತೋರಣಗಲಲ್ಲಿ ಬಿಂದಿಗಮ್ಮ ಹೊರಟ ಸ್ಥಳದಿಂದ ಮೊದಲು ಸಿಕ್ಕುವುದು ಭರತೂರು ತೋರಣ. ಈ ತೋರಣದ ಬಳಿ ಜಾತ್ರೆಗೆ ಬಂದಿರುವ ಜನರೆಲ್ಲರೂ ಸೇರುವುದರಿಂದ ಅಲ್ಲಿ ನೂಕು ನುಗ್ಗಲು ಇರುತ್ತದೆ. ಈ ಸಂದರ್ಭ ಕುರಿ.

ಹಂಜಳಿಗೆ ಭರತೂರು/ನಡುವೆ ಕೊಡಗತವಳ್ಳಿ
ನಡು ಬಾಗಿ ಬಾರೆ ಬಿಂದಿಗಮ್ಮ/ ಕಳಸಾದ
ಕೊನೆ ತಗುಲಿ ಮುತ್ತು ಸಡಿಲಾವು// ೩೬

ಹೀಗೆ ಹಾಡಲಾಗುತ್ತಿದೆ.

ಭರತೂರು ಬಾಗಿಲಿನಲ್ಲಿರುವುದು ಮೊದಲನೆಯ ತೋರಣ. ಹನ್ನೆರಡನೆಯ ತೋರಣ, ರಂಗನ ಬೆಟ್ಟದ ಬುಡದಲ್ಲಿದೆ. ಭರತೂರಿನಿಂದ ಮುಂದಿನ ಹಾದಿ, ಕಾಲು ಹಾದಿ, ಉದ್ದಕ್ಕೂ ಕಲ್ಲು ಮುಳ್ಳು, ಕೆಲವು ಕಡೆ ಹಾದಿ ಗದ್ದೆ ಹಳ್ಳದಲ್ಲಿ ಹೋಗುತ್ತದೆ. ಹಗಲು ಹೊತ್ತೂ ಆ ದಾರಿಯಲ್ಲಿ ಹೋಗಲು ಹಿಂದೆ ಮುಂದೆ ನೋಡಬೇಕಾಗುತ್ತದೆ. ಇಂತಹ ದಾರಿಯಲ್ಲಿ ಬಿಂದಿಗಮ್ಮ ರಾತ್ರಿಯ ಹೊತ್ತು ಜಿಂಕೆಯಂತೆ ಓಡುತ್ತಾಳೆ. ಆಕೆಯ ಜತೆ ಸಮಸಮನಾಗಿ ಓಡಲು ದೃಢಕಾಯರಾದ ಯುವಕರಿಗೂ ಕಷ್ಟವಾಗುತ್ತದೆ. ಹನ್ನೇರಡನೆಯ ತೋರಣವನ್ನು ದಾಟಿದ ಮೇಲಂತೂ ಬೆಟ್ಟವನ್ನು ಹತ್ತಬೇಕು. ಹೆಜ್ಜೆ ಹೆಜ್ಜೆಗೂ ಮುಂದಕ್ಕೆ ಉತಾರು ಹಿಂದಕ್ಕೆ ಇಳಿಜಾರು, ಇಂತಹ ಕಷ್ಟಕರವಾದ ಹಾದಿ. ಮುಂದೆ ಪಂಜಿನವನು ದಾರಿ ತೋರಿಸುತ್ತಿರಲು ಬಿಂದಿಗಮ್ಮ, ಗಾಳಿಯಲ್ಲಿ ಹಾರಿ ಹೋಗುವಂತೆ ಬೆಟ್ಟವನ್ನೇರಿ ರಂಗನಾಥನ ಸನ್ನಿಧಿಯನ್ನು ಸೇರುತ್ತಾಳೆ. ಅಷ್ಟೊತ್ತಿಗೆ ರಂಗದೇವರನ್ನು ಅಡ್ಡೆಕಾರರು ಮೇಲಕ್ಕೆ ಹೊತ್ತು ತಂದಿರುತ್ತಾರೆ. ಬಿಂದಿಗಮ್ಮ ದೇವರ ಮುಂದೆ ಹೋಗಿ ನಿಂತು ಬಿಡುತ್ತಾಳೆ. ಯಾವ ಶಕ್ತಿ ಅವಳನ್ನು ಇಲ್ಲಿಯವರೆಗೆ ಓಡಿಸಿತೋ, ಅದೇ ಶಕ್ತಿ ಅವಳನ್ನು ಅಲ್ಲಿ ನಿಲ್ಲಿಸಿಬಿಡುತ್ತದೆ. ಮತ್ತೊಬ್ಬ ಪೂಜಾರಿ ಬಂದು ಅವಳ ತಲೆಯ ಮೇಲಿನಿಂದ ತಟ್ಟೆಸಹಿತವಾದ ಬಿಂದಿಗೆಯನ್ನು ತೆಗೆದುಕೊಳ್ಳುತ್ತಾನೆ. ಅದನ್ನು ' ಅವಳ' ತಲೆಯಿಂದ ಇಳಿಸಿದ ಕೂಡಲೇ ಪೂಜಾರಿ ನೆಲಕ್ಕೆ ಕುಸಿದು ಬಿಡುತ್ತಾನೆ. ಆದರೆ ಉಳಿದವರು ಅವನನ್ನು ಬೀಳಗೊಡುವುದಿಲ್ಲ. ನಾಲ್ಕು ಜನ ಆತನನ್ನು ಎತ್ತಿಕೊಂಡು ಹೋಗಿ ಒಂದು ಚಾಪೆಯ ಮೇಲೆ ಮಲಗಿಸುತ್ತಾರೆ. ಹೊರಟ ಸ್ಥಳದಿಂದ ದೇವಸ್ಥಾನವನ್ನು ಮುಟ್ಟಲು, ಪೂಜಾರಿಗೆ ೧ ೧/೨ ಗಂಟೆ ಹಿಡಿದಿರುತ್ತದೆ. ಪೂಜಾರಿ, ಬೆಳಗಿನವರೆಗೆ ಅರ್ಧ ನಿದ್ರೆಯಲ್ಲಿ, ಅರ್ಧ ಮತ್ತಿನಲ್ಲಿ ಮಲಗಿರುತ್ತನೆ. ಬೆಳಗ್ಗೆ ಎದ್ದು ಸ್ನಾನ ಮಾಡಿ ರಂಗನಾಥನ ಸನ್ನಿಧಿಯಲ್ಲಿ ಪೂಜೆಗೆ ಸಿದ್ಧನಾಗಿರುತ್ತಾನೆ. ಆ ದಿನವೆಲ್ಲಾ ಅಲ್ಲಿಯೂ ದೇವರಿಗೆ ನಾನಾ ಉತ್ಸವಗಳು ನಡೆದು ಸಂಜೆಯ ವೇಳೆಗೆ ಜಾತ್ರೆ ಮುಕ್ತಾಯವಾಗುತ್ತದೆ.

ಬೋಳು ತಲೆಯ ಮೇಲೆ ತಟ್ಟೆಯನ್ನೂ ನೀರು ತುಂಬಿದ ಕಲಶವನ್ನೂ ಹೊತ್ತುಕೊಂಡು, ಕತ್ತಲೆಯಲ್ಲಿ ಕಾಡುದಾರಿಯಲ್ಲಿ ಬೆಟ್ಟದ ಮೇಲೆ ಕೈಬಿಟ್ಟು ನಮಸ್ಕರಿಸುತ್ತಾ ಆವೇಶದಿಂದ ಓಡುವ ಪೂಜಾರಿಯ ಭಕ್ತಿಯಂತೂ ನಿಜವಾಗಿ ಇದ್ದೇ ಇದೆ. ಒಂದು ಸಲ " ಬಿಂದಿಗಮ್ಮನ ಜಾತ್ರೆ"ಯನ್ನು ನೋಡಿದ ಮೇಲೆ ಇದನ್ನು ಪದೇ ಪದೇ ನೋಡುವುದಕ್ಕಾಗಿ ಬದುಕಿರಬೇಕು ಎಂಬ ಆಸೆ ಯಾರಿಗಾದರೂ ಉಂಟಾಗುತ್ತದೆ.

ಹೀಗೆ ಜನಪದರಲ್ಲಿ ರಕ್ತಗತವಾಗಿ ಉಳಿದು ಬಂದಿರುವ ಭಕ್ತಿ, ಭಾವಾವೇಶಗಳನ್ನು ಗೊರೂರರು ವ್ಯಾಖ್ಯಾನಿಸಿರುವ ರೀತಿ ಬಹಳ ಅದ್ಭುತವಾಗಿದೆ, ಸಮರ್ಥವಾಗಿದೆ. ಪ್ರತಿ ಅಂಶವನ್ನು ಎಳೆ ಎಳೆಯಾಗಿ ಕಣ್ಣೆದುರಿಗೆ ನಡೆಯುತ್ತಿದಿಯೋ ಎಂಬಂತೆ ವಿವರಿಸಿದ್ದಾರೆ.

ಬಿಂದಿಗಮ್ಮನ ಜಾತ್ರೆಯಂತೆಯೇ ಗೊರೂರಿನಲ್ಲಿ ನಡೆಯುತ್ತಿದ್ದ ಯೋಗಾನರಸಿಂಹಸ್ವಾಮಿಯ ರಥೋತ್ಸವವು ಸಹ ಪ್ರಮುಖವಾದುದಾಗಿದೆ. ನರಸಿಂಹಸ್ವಾಮಿ ದೇವಸ್ಥಾನದ ಪ್ರಾಮುಖ್ಯತೆಯನ್ನು ಅವರು ಹೀಗೆ ತಿಳಿಸುತ್ತಾರೆ.

" ನಮ್ಮೂರು ನರಸಿಂಹಸ್ವಾಮಿ ದೇವಸ್ಥಾನ ನಮ್ಮೂರಿಗೆ ಕಣ್ಣು, ನಮ್ಮೂರಿನಲ್ಲಿ ಯಾವ ದೊಡ್ಡ ಕೆಲಸ ನಡೆಯಬೇಕಾದರೂ ದೇವಸ್ಥಾನದ ಸಂಬಂಧವಿಲ್ಲದೆ ನಡೆಯುವಂತೆಯೇ ಇಲ್ಲ........." ಎಂಬುದಾಗಿ ವಿವರಿಸುವ ಗೊರೂರರು ಊರಿನ ಎಲ್ಲ ವಿವರಗಳನ್ನು ಕೊಟ್ಟ ನಂತರ ಜಾತ್ರೆಯ ಚಿತ್ರಣವನ್ನು ನೀಡುವ ಬಗೆ ಹೀಗಿದೆ.

## ಯೋಗನರಸಿಂಹ ಸ್ವಾಮಿ ಉತ್ಸವ

ಗೊರೂರರು ನರಸಿಂಹಸ್ವಾಮಿ ಮೆರೆಯಿಸಿಕೊಳ್ಳುವ ದೇವರು. ಉತ್ಸವ, ಅಲಂಕಾರ, ಒಡವೆ. ವಾಹನ ಎಲ್ಲಾ ಈ ಮೆರೆಯುವ ದೇವರಿಗೆಯೇ.ಗೊರೂರಿನಲ್ಲಿ ನರಸಿಂಹ ದೇವರಿಗೆ ಹೊರತು ಮತ್ತಾವ ದೇವರಿಗೂ ತೇರಿಲ್ಲ- " ಗೊರೂರು ನರಸಿಂಹ ಸ್ವಾಮಿ ಜಾತ್ರೆಯಲ್ಲಿ ಅತ್ಯಂತ ಮುಖ್ಯವಾದ ವಿಷಯವೆಂದರೆ ತೇರು. ಈ ತೇರು ಬಹಳ ದೊಡ್ಡದಾಗಿ ಭೂತಾಕಾರವಾಗಿದೆ. ಹಿಂದೆ ಇದರಲ್ಲಿ ಆರು ಚಕೀಗಳಿದ್ದವು . ಈಚೆಗೆ ಎರಡು ಚಕ್ರಗಳನ್ನು ತೆಗೆದು ನಾಲ್ಕೇ ಚಕ್ರಗಳನ್ನು ಮಾಡಿದ್ದಾರೆ. ಎರಡು ಕಡೆ ಹೊರ್ಜಿಗಳಿಗೂ ಪೂರ್ತಿ ಜನ ನಿಂತು ಹಿಂದೆ ತ್ರಾಣವುಳ್ಳ ಇಪ್ಪತ್ತು ನಾಲ್ಕು ಜನರು ಒಂದೊಂದು ಕಡೆಗೂ "ಹೆದ್ನಾ" ಕೊಡದೆ ಹೋದರೆ ಈ ತೇರು ಮುಲುಕುವುದಿಲ್ಲ. ಕೆಲವು ಕಡೆ ಇರುವಂತ ಹುಡುಗರ ಕೈಗಾಡಿಗಳಂತ ಒಬ್ಬಬ್ಬರು ಇದನ್ನು ನಿಧಾನವಾಗಿ ಊರಸುತ್ತ ಮೂಗುದಾರದಿಂದ ಸಾಧವಾದ ಹಸುವನ್ನು ಎಳೆದು ಕೊಂಡು ಹೋಗುವಂತೆ ಎಳೆದುಕೊಂಡು ಹೋಗಲು ಸಾಧ್ಯವಿಲ್ಲ . ಅದರ ಆಕಾರವು ಅಷ್ಟು ಜನರ ಉತ್ಸಾಹಕ್ಕೂ ಒಂದು ವರ್ಷಕ್ಕೆ ಹಬ್ಬವೆಂಬ ದೊಡ್ಡಸ್ತಿಕೆಗೂ ಸಾರ್ಥಕ್ಯವನ್ನು ಉಂಟುಮಾಡತಕ್ಕುದಾಗಿದೆ.

ಗೊರೂರ ತೇರು (ದಲಿತರು) ಬಂದಲ್ಲದೆ ಚಲಿಸುವಂತೆಯೇ ಇಲ್ಲ. ಆ ದಿನ ಅವರ ದೊಡ್ಡಸ್ತಿಕೆ ಉತ್ಸಾಹ . ಅವರಿಗೆ ನಿಜವಾಗಿಯೂ ದೇವರು ಪ್ರತ್ಯಕ್ಷನಾದನೋ ಎನ್ನುವಷ್ಟು ಸಂಭ್ರಮ ಅವರೆಲ್ಲ ರಥೋತ್ಸವದ ದಿನ ಹೊಸಬಟ್ಟೆಯನ್ನು ತೊಟ್ಟು ಕೊಂಡು ಸಂತೋಷದಿಂದ ಇರುತ್ತಾರೆ.

" ತೇರಿನ ದಿನ ಪಂಚಮರ (ದಲಿತರ) ಕೇರಿಯಲ್ಲಿ ಸಂಭ್ರಮವೋ ಸಂಭ್ರಮ . ಮೊದಲದಿನ ತಮಟೆಗಳನ್ನು ಕಾಯಿಸಿ ಗಾಳಿಗೇ ಅವು ಸದ್ದಾಗುವಂತೆ ಮಾಡಿರುತ್ತಾರೆ. ತೇರಿನ ದಿನ ಅವರು ರಥದಲ್ಲಿ ದೇವರನ್ನು ನೋಡಿದ ಹೊರತು ಬಾಯಿಗೆ ನೀರನ್ನೂ ಹಾಕುವುದಿಲ್ಲ. ಆದರೆ ಅದೇ ಉಳಿದವರ ವಿಚಾರದಲ್ಲಿ ಈ ರೀತಿ ಹೇಳಲಾಗುವುದಿಲ್ಲ" ಎನ್ನುತ್ತಾರೆ ಗೊರೂರರು.

ತೇರಿನ ದಿನ ಮಧ್ಯಾಹ್ನ ಸುಮಾರು ಒಂದು ಗಂಟೆಗೆ ದೇವರನ್ನು ರಥದಲ್ಲಿ ಕೂರಿಸುವರು. ದಲಿತರು ಮನೆಗೆ ಒಂದಾಳಿನಂತೆ ತಮ್ಮ ಕೇರಿಯಿಂದ ವಾದ್ಯಗಳ ಸಮೇತ ಹೊರಡುವರು. ಅಂದು ಅವರ ವಾದ್ಯಕ್ಕೆ ಒಂದು ವಿಶೇಷತೆ ಇದ್ದು ಎಲ್ಲರಿಗೂ ಎಂದೂ ಇಲ್ಲದ ಆನಂದವನ್ನು ಉಂಟುಮಾಡುತ್ತದೆ. ಸುಮ್ಮನೆ ಕುಳಿತಿದ್ದವನನ್ನೂ ಗುದ್ದಿ ತಿವಿದು ಎಬ್ಬಿಸತಕ್ಕ ಶಕ್ತಿ ಆ ವಾದ್ಯದಲ್ಲಿರುತ್ತದೆ. ಅದು ಹತ್ತಿರ ಹತ್ತಿರ ಬಂದಂತೆಲ್ಲಾ ಅವರ ಪ್ರಭಾವಕ್ಕೆ ಸಿಕ್ಕಿ ಪರವಶರಾಗುವರು. " ಹೊಲೆಯರು ಬಂದರು, ಹೊಲೆಯರು ಬಂದರು " ಎಂಬ ಧ್ವನಿ ಎಲ್ಲೆಲ್ಲೊ ಹೊರಡುವುದು. ಅಂದು ಅವರಿಗೆ ಮತ್ತೆಂದೂ ದೊರೆಯದಷ್ಟು ಸ್ವಾಗತ . ತೇರಿಗೆ ಅರ್ಚಕ, ಪೂಜಾರಿ , ವಾದ್ಯ ಪಂಜು, ವೇದಾಪಾರಾಯಣ ಈ ಉಳಿದ ಎಲ್ಲವುಗಳಿಗಿಂತ ಅವರೇ ಅಂದು ಹೆಚ್ಚು ಮುಖ್ಯರಾಗಿ ಕಾಣುವರು. ಮುಂದೆ ಅವರ ವಾದ್ಯ, ಹಿಂದುಗಡೆ ಗಂಡಾಳುಗಳು, ಅವರ ಹಿಂದುಗಡೆ ಹೆಂಗಸರು, ಈ ಮೆರವಣಿಗೆ ತೇರನ್ನು ಮೂರು ಸುತ್ತು ಪ್ರದಕ್ಷಿಣೆ ಮಾಡಿ ಈ ಹಾಡನ್ನು ಹೇಳುತ್ತಾ ಮುಂದೆ ಕುಣಿಯುವುದು.

ತೇರಿಗ್ಹೋಗೋಣ ಬನ್ನಿರೆ  ಸ್ವಾಮಿ ರಥಾಕ್ಹೋಗೋಣ ಬನ್ನಿರೆ
ನೋಟಾಕೆ ಚೆಂದ್ವಂತೆ ನೊಣವೀನ ಕೆರೆಯಂತೆ
ಕೋಟೆಯ ಬುಡದ ದೇವರಾಯ್ನಂತೆ
ಅಯ್ಗೋಳ ಗುಡಿಯಲ್ಲಿ ಏನೇನು ಅಡ್ಗೆ ಊಟ ಉದ್ದು ಮತ್ತೆ ಪನಿವಾರ
ನೆನೆಯಕ್ಕಿ ನೆನಗಡಲೆ ಪನಿವಾರ  ನಮ್ಮ ಮುದ್ದು ನರಸಿಂಹನ ಗುಡಿಯಾಗೆ |
ಹಾರುವರ ಕೇರಿಯ ತೇಗದ ತೇರು ಯಾರ್ಯಾರು ನೂಕಿದ್ರು ಮಲಕೊಲ್ದು |
ಯಾರ್ಯಾರು ನೂಕಿದ್ರು ಮಲಕದ ತೇರು  ಗೊರವೂರ ಹೊಲೆಯರು
ಮುಟ್ಟಿದ್ರೆ ನಲಿಯುವ ||ತೇರಿ||

ಹೀಗೆ ಎಷ್ಟೋ ಹೊತ್ತು ತಮೆನ್ನೆ ತಾವು ಮರೆತಂತೆ ಕೈಯಲ್ಲಿ ಚೌಕವನ್ನು ಹಿಡಿದುಕೊಂಡು ವಿವಿಧವಾದ ಬಂಧದಿಂದ ಕುಣಿಯುವರು. ಎಷ್ಟು ಕುಣಿದರೂ ಅವರಿಗೆ ಆಯಾಸವಾದಂತೆ ಕಾಣುವುದಿಲ್ಲ. ಬಂದ ಜನರೆಲ್ಲಾ ಅವರ ಆ ಕುಣಿತವನ್ನು ನೋಡುತ್ತಾ ಸ್ವಲ್ಪ ಹೊತ್ತು ನಿಂತಮೇಲೆ

ಅರ್ಚಕನು ರಥದ ಮೇಲಿನಿಂದ ದೇವರ ಕತ್ತಿನಲ್ಲಿ ಹಾರಗಳ ಹೊರ್ಜಿಯನ್ನು ಹಾಕಿ, ಅವರಿಗೆ ತೀರ್ಥವನ್ನು ಕೊಡುವನು . ಸುತ್ತ ಸೇರಿರುವವರಲ್ಲಿ ಉತ್ಸಾಹಿ ತರುಣರು ಅವರ ನೆತ್ತಿಗೆ ಕುಂಕುಮವನ್ನು ಬಳಿಯುವರು. ಒಕ್ಕಲಿಗರು ದವನವನ್ನು ಸಿಕ್ಕಿಸಿದ ಬಾಳೆಹಣ್ಣನ್ನು ಅವರಿಗೆ ತಿನ್ನಿಸುವರು.

**ಹೆದ್ನ ಹಾಕುವುದು :**

ರಥೋತ್ಸವದ ಸಮಯದಲ್ಲಿ ತೇರನ್ನು ಎಳೆಯುವ ಘಟನೆ ಅತ್ಯಂತ ಪ್ರಮುಖವಾದ ಘಟನೆ. ಹೇಗೆ ತೇರನ್ನು ಎಳೆಯಬೇಕು, ಹೇಗೆ ನಿಲ್ಲಿಸಬೇಕು, ಎಂಬುದೆಲ್ಲಾ ಈ ವಿಷಯದಲ್ಲಿ ಅನುಭವ ಪಡೆದಿರುವವರಿಗೆ ಗೊತ್ತಿರುತ್ತದೆ. ಭಾರಿ ಗಾತ್ರದ ತೇರು ಸುಮ್ಮನೆ ಉರುಳಲಾರದು ಅಥವಾ ನಿಲ್ಲಲಾರದು. ಅದಕ್ಕೆ ಅನುಕೂಲವಾದ ಸನ್ನೆಗಳನ್ನು ಮಾಡಿಕೊಂಡಿರುತ್ತಾರೆ. ನಿಂತಿದ್ದ ತೇರನ್ನು ಹೂರ್ಜಿ ಹಿಡಿದು ಎಷ್ಟು ಎಳೆದರೂ ಅಲ್ಲಾಡಿಸುವುದಕ್ಕೂ ಆಗುವುದಿಲ್ಲ. ಅಂಥ ಸಂದರ್ಭದಲ್ಲಿ " ಹೆದ್ನ ಹಾಕುವುದು "

ಸುಮಾರು ೧೮ ಮೊಳದ ಎರಡು ತೊಲೆ, ಅದರಲ್ಲಿ ಒಂದೊಂದು ಮೊಳಕ್ಕೆ ಒಂದೊಂದು ಕಂಡು ಆ ಕಂಡಿಗೆ ಹಗ್ಗವನ್ನು ಕಟ್ಟಿ ಹನ್ನೆರಡು ಜನ ಎತ್ತಿ ಅದನ್ನು ತೇರಿನ ಚಕ್ರಕ್ಕೆ ಕೊಟ್ಟು ಅಮುಕುವರು. ಎರಡು ಚಕ್ರಗಳಿಗೂ ಏಕ ಕಾಲದಲ್ಲಿ ಕೊಟ್ಟು ಮೀಟಿದರೆ ಆಗ ತೇರು ಅಲ್ಲಾಡುವುದಕ್ಕೆ ಪ್ರಾರಂಭವಾಗುವುದು. ಆ ಕಾಲದಲ್ಲಿ ' ಹೂರ್ಜಿ' ಹಿಡಿದವರು ಎಳೆದರೆ ತೇರು ಮುಂದಕ್ಕೆ ಹೋಗುವುದು "

**ಗೊದಮ ಹಾಕುವುದು :**

ತೇರಿಗೆ ಹಿಂದುಗಡೆ "ಹೆದ್ನ"ಹೇಗೆ ಮುಖ್ಯವೋ ಮುಂದುಗಡೆ " ಗೊದಮ" ಹಾಗೆಯೇ ಮುಖ್ಯ . ಈ ಗೊದಮ ಎತ್ತಿಗೆ ಮೂಗುದಾರ ಹೇಗೋ ಹಾಗೆ . ಬೆಟ್ಟದಂತಹ ಆ ದೊಡ್ಡ ತೇರು ತಾನು ಹೊರಟ ಜಾಗವನ್ನು ಸುರಕ್ಷಿತವಾಗಿ ಆ ಚಿಕ್ಕ ಬೀದಿಗಳಲ್ಲಿ ನಾಲ್ಕು ಮೂಲೆಗಳನ್ನು ದಾಟಿ ಸೇರಬೇಕಾದರೆ ಗೊದಮ ಕೊಡುವವನಿಗೆ ಬಹಳ ತಾಖತ್ ಇರಬೇಕು. ಒಂದು ದೃಷ್ಟಿಯಲ್ಲಿ ಇದು ಅತ್ಯಂತ ಕಷ್ಟವಾದ ಕೆಲಸ . ಚಕ್ರವಮುಂದೆ ನಿಂತುಕೊಂಡು, ಗೊದಮವನ್ನು ಆಚೆ ಈಚೆ ಕೊಟ್ಟು ತೇರು ಮನೆಗಳ ಮೇಲೆ ನುಗ್ಗದಂತೆ

ಸಮಾಧಾನದಲ್ಲಿ ಇಟ್ಟುಕೊಂಡು ಕೆಲಸ ಮಾಡಬೇಕಾದರೆ ಬಹಳ ಧೈರ್ಯ ಬೇಕು- " ಆ ಗಾಲಿಗಳು ನಮ್ಮ ಮೇಲೆಯೇ ಉರುಳಿ ಬರುವಂತೆ ಕಾಣುತ್ತವೆ. ಮುಂದೆ ಸಾವಿರಾರು ಜನ ಹೊರ್ಜಿ ಹಿಡಿದು ಎಳೆಯುತ್ತಿರುವಾಗ ಅಷ್ಟು ಜನರ ಬಲವು ಸರಿಯಾಗಿ ತೇರು ಮನೆಗಳ ಮೇಲೆ ನುಗ್ಗದಂತೆ , ಒಂದು ಚಿಕ್ಕ ಗೊದಮದಿಂದ ಹಿಡಿಯಲು ಬಹಳ ಬುದ್ಧಿವಂತಿಕೆ ಬೇಕು ಸ್ವಲ್ಪ ಹೆಚ್ಚು , ಕಡಿಮೆಯಾದರೂ ಗೊದಮವೂ ಅದನ್ನು ಕೊಡುವವನೂ ಪುಡಿಪುಡಿಯಾಗುತ್ತಾರೆ. ಆದರೆ ಅದರಲ್ಲಿ ಏನು ಆನಂದವಿದೆ. ಏನು ಉತ್ಸಾಹವಿದೆ! ಏನು ಒಂದು ಛಾತಿಯಿದೆ! ಜಯಿಸಬೇಕೆಂಬ ಮನುಷ್ಯನ ಸ್ವಭಾವಸಿದ್ಧವಾದ ಆಸೆಯಿದೆ!

ಇವುಗಳೆಲ್ಲಾ ಜೂಜಿಗಾಗಿ ಮೋಟಾರ್ ಸೈಕಲ್ಲನನು ಬೆಟ್ಟದಿಂದ ಕೆಳಕ್ಕೆ ಬಿಡುವವನ ಉತ್ಸಾಹವನು ಜ್ಞಾಪಕಕ್ಕೆ ತರುತ್ತವೆ. ಅಪಾಯವು ಎಷ್ಟು ಹೆಚ್ಚೋ ಅದರ ಪ್ರತಿಫಲವಾದ ಆನಂದವೂ ಅಷ್ಟೇ ಹೆಚ್ಚು. ಬದುಕಿಗೆ ಇಂತಹ ರೋಮಾಂಚನವು ಬೇಕು. ಅದನ್ನು ಅನುಭವಿಸಲಾರದ ಮನಸ್ಸು ಅಲ್ಪ ಮನಸ್ಸು. ಈಗ ಈ ಗೊದಮವನ್ನು ಗೊರೂರಿನ್ನ ಶಾಮಯ್ಯಂಗಾರು ಕೊಡುತ್ತಿದ್ದಾರೆ. ಇವರಿಗಿಂತ ಮುಂಚೆ ಇವರ ತಂದೆಯವರು ಕೊಡುತ್ತಿದ್ದರು. ಇವರ ತಂದೆಯವರಿಗೆ ನಾಲ್ಕೈದು ಸಾರಿ ತಲೆ ಒಡೆದಿತ್ತು. ಹತ್ತು ಹನ್ನೆರಡು ಸಾರಿ ಕೈ ಬೆರಳುಗಳು ಜಜ್ಜಿ ಹೋಗಿದ್ದವು. ಈಚೆಗೆ ಶಾಮಯ್ಯಂಗಾರಿಗೂ ಏಟು ಬೀಳದ ವರ್ಷವೇ ಇಲ್ಲ. ತೇರು ಆದ ಎರಡು ತಿಂಗಳು ಅವರು ಬಟ್ಟೆಯನ್ನು ಬೆರಳಿಗೆ ಕಟ್ಟಿಯೇ ಇರಬೇಕಾಗುತ್ತದೆ. ಗೊರೂರಿನ ಮುಖಂಡರೊಬ್ಬರು ಈ ಗೊದಮದ ಅಪಾಯವನ್ನು ಅರಿತವರಾದ್ದರಿಂದ ತಾವು ಸಾಯುವಾಗ ತಮ್ಮ ಮಗನನ್ನು ಕರೆದು " ಗೊದಮ ಕೊಡುವುದಿಲ್ಲ" ಎಂದು ಅವನಿಂದ ವಾಗ್ದಾನ ತೆಗೆದು ಕೊಂಡಿದ್ದರು.

" ಆದರೆ ಅದರ ಅಪಾಯಕ್ಕೆ ನಮ್ಮವರು ಅಂಜಲಿಲ್ಲ. ಆ ಸಡಗರವನ್ನೂ ರೋಮಾಂಚನವನ್ನೂ ಕಳೆದುಕೊಳ್ಳಲು ಗೊರೂರಿನ ಜನ ತಯಾರಾಗಿಲ್ಲ . ಪ್ರತಿ ವರ್ಷವೂ ಗೊದಮವನ್ನು ಕೊಡಲು ಉತ್ಸಾಹಿಗಳಾಗಿ ಮುಂದೆ ಬರುತ್ತಿರುವವರ ಸಂಖ್ಯೆ ಹೆಚ್ಚುತ್ತಾ ಇದೆ. ಬಿದ್ದು ಕತ್ತು ಮುರಿಯಬಹುದೆಂಬ ಭಯದಿಂದ ಯಾವ ಸವಾರನಾದರೂ ಜೂಜಿನ ಕುದುರೆ ಏರದುದನ್ನು ಕಂಡವರಿದ್ದಾರೆಯೇ ?

ಗೊರೂರಿನಲ್ಲಿ ನರಸಿಂಹಸ್ವಾಮಿಯ ರಥೋತ್ಸವ ಪ್ರಾರಂಭವಾದ ದಿನದಿಂದ ಇಂದಿನವರೆಗೂ ನರಸಿಂಹಚಾರ್ಯರ ಮೂಲೆ ಮನೆಯ ಜಗಲಿಯನ್ನು ಸವರುವುದು ನಿಂತಿಲ್ಲ. ತೇರಿನ ಓಟ ಯಾವಾಗಲೂ ಬಲಗಡೆಗೇ ಇದೆ. ಆದರೆ ಈ ಮನೆ ಇರುವುದು ಎಡಗಡೆಯಲ್ಲಿ . ಆದರೂ ಈ ಮನೆಯ ಜಗಲಿಯನ್ನು ಸವರಿಕೊಂಡು ಹೋಗುವುದು ನಿಂತಿಲ್ಲ. ಗೊದಮದವರು ಎಷ್ಟು ಪ್ರಯತ್ನ ಮಾಡಿದರೂ ತೇರು ನೆಟ್ಟಗೆ ಬಂದು ಅಲ್ಲಿ ಒಂದು ಗಳಿಗೆ ನಿಂತುಬಿಡುತ್ತದೆ. ಆಗ ಮನೆಯ ಯಜಮಾನ ತನ್ನ ಮನೆಯ ಜಗಲಿಯನ್ನು ಕೆಡವಿ ತೇರಿನ ಗಾಲಿಗೆ ತೆಂಗಿನಕಾಯಿ ಇಡಗಾಯಿ ಹಾಕಿ , ಮಂಗಳಾರತಿ ಮಾಡಿದ ನಂತರ ತೇರು ಮುಂದಕ್ಕೆ ಹೊರಡುವುದು(" ನೂರಾರು ವರ್ಷಗಳಿಂದ ಒಂದೇ ಸಮನಾಗಿ ಮನೆಯ ಜಗಲಿಯನ್ನು ಕೆಡವುತ್ತಿರುವ ತೇರು ಒಂದು ವರ್ಷ ವಾದರೂ ಮನೆಯನ್ನು ಕೆಡವದೆ ಇರುವುದು ಆಶ್ಚರ್ಯಕರ ಸಂಗತಿ ")

ತೇರಿನ ದಿನ ಸಂಜೆವರೆಗೆ ತೇರನ್ನು ಎಳೆದು ಬೀದಿಯ ಮಧ್ಯೆ ನಿಲ್ಲಿಸುತ್ತಾರೆ. ಆ ರಾತ್ರಿ ಸುಮಾರು ಎರಡು ಗಂಟೆಗೆ ಪ್ರಾರಂಭಿಸಿ ಮರುದಿನ ಬೆಳಗಾವುದರೊಳಗೆ ಅದರ ಸ್ವಸ್ಥಾನದಲ್ಲಿ ನಿಲ್ಲಿಸುತ್ತಾರೆ.ತೇರು ಸುರಕ್ಷಿತವಾಗಿ ಸ್ವಸ್ಥಾನದಲ್ಲಿ ನಿಂತುದಕ್ಕೆ ಅತ್ಯಂತ ಉತ್ಸಾಹದಿಂದ ಕುಣಿಯುತ್ತಾರೆ. ತೇರು ನೇಲೆಗೆ ನಿಂತುದು ಒಂದು ಪವಿತ್ರವಾದ ಕಾಲ. ಆಗ ಭಕ್ತರು ಅನೇಕ ಹರಕೆಗಳನ್ನು ಮಾಡಿಕೊಳ್ಳುತ್ತಾರೆ.

ತೇರು ಹರಿದಾವೋ ತಾನಕ್ಕೆ ನಿಂತಾವೊ
ತಾರೊ ಚೆನ್ನಯ್ಯ ಜವನವ
ತಾರೊ ಚೆನ್ನಯ್ಯ ಎವನವ |        ಬಾಳೆಹಣ್ಣ
ಬೇಡಿಕೊಳ್ಳೆ ಮಗಳೆ ಸೆರಗೊಡ್ಡಿ

**ಹೀಗೆ ಬೇಡಿಕೊಳ್ಳು ತ್ತಾರೆ.** ಹಾಗೆಯೇ ಬೆಟ್ಟದ ಜಾತ್ರೆಯಲ್ಲಿ ದಾಸಯ್ಯಗಳು ಸೇರಿ ಆಚರಿಸುತ್ತಿದ್ದ **'ಹರಿಸೇವೆ'** ಎಂಬ ಪದ್ಧತಿಯ ಬಗೆಗೂ ವಿವರಿಸಿದ್ದಾರೆ. " ಆ ಹರಿಸೇವೆ ಎಂಬುದು ಈ ರೀತಿಯಾಗಿದೆ. ನಾಲ್ಕು ಐದು ದಾಸಯ್ಯಗಳು ಆವೇಶ ಬಂದವರಂತೆ ತಮ್ಮ ಮೇಲೆ ದೇವರು ಬಂದಿದೆಯೆಂದು ಹೇಳಿಕೊಂಡು ಕುಣಿಯುವುದಕ್ಕೆ ಪ್ರಾರಂಭಿಸುತ್ತಾರೆ. ಆದಾದ ಮೇಲೆ ' ಮಣೆಹಾಕುವುದು' ಎಂಬುದಾಗಿ ಒಂದು ಪದ್ಧತಿಯನ್ನು ಅನುಸರಿಸುತ್ತಾರೆ. ಈ ಮಣೆ ಹಾಕುವುದೆಂಬುದು ಕನ್ನಡ ನಾಡಿನಲ್ಲಿ ಎಲ್ಲಾ ಕಡೆಗಳಲ್ಲಿಯೂ ಹಳ್ಳಿಗಳಲ್ಲಿಯೂ ನಡೆಯುತ್ತದೆ. ಅದರ ಕ್ರಮ ಈ ರೀತಿ ಭಕ್ತಾದಿಗಳು ತೆಂಗಿನಕಾಯಿ, ಕಡ್ಲೆಪುರಿ ಬೆಲ್ಲದ ಚೂರು ಇವುಗಳನ್ನೆಲ್ಲಾ ಬೆರಸಿ ನೆಲದ ಮೇಲೆ ಒಂದು ಬಟ್ಟೆಯನ್ನು ಹಾಸಿ, ಅದರ ಮೇಲೆ ಐದು ದಾಸಯ್ಯಗಳಿಗೆ ಐದು ಕಡೆ ಈ ಕಡ್ಲೆಪುರಿಯನ್ನು ಗುಡ್ಡೆ ಹಾಕುತ್ತಾರೆ. ಅನಂತರ ದಾಸಯ್ಯಗಳು ಅದರ ಸುತ್ತ ಬಂದು

ಕುಣಿಯುತ್ತಾ ಹಾ ಹೂ ಎಂದು ಕಿರುಚುತ್ತಾ ಮೂರು ನಾಲ್ಕು ಸಲ ಆ ಚೌಕದ ಸುತ್ತಿನ ಕಡೆಗೆ ಬಗ್ಗುತ್ತಾ ಕೊನೆಗೆ ತಮಟೆ ಧ್ವನಿಗಳ ಮಧ್ಯದಲ್ಲಿ ಮಂಡಿಗಾಲಿಟ್ಟುಕೊಂಡು ಕೈಯಿಂದ ಮುಟ್ಟದೆ ಬಾಯಿಯಲ್ಲಿಯೇ ಆ ತಿಂಡಿಯನ್ನು ತಿಂದುಬಿಡುತ್ತಾರೆ. ಚೌಕದಲ್ಲಿ ಏನಾದರೂ ಅಲ್ಪ ಸ್ವಲ್ಪ ಉಳಿದರೆ, ಅದನ್ನು ಹಿಂದಲ ಭಕ್ತಾದಿಗಳು ಹಂಚಿಕೊಳ್ಳುತ್ತಾರೆ. ನಮ್ಮೂರಿನ ಬೆಟ್ಟದ ಜಾತ್ರೆಯಲ್ಲಿ ಒಂದೇ ದಿವಸ ೩೦೦–೪೦೦ ಭಕ್ತರು ಈ ರೀತಿ ಮಣೆ ಹಾಕಿಸುತ್ತಾರೆ".*

## ಆಹಾರ ಪದ್ಧತಿ

**ಉಪ್ಪಿಟ್ಟು :** ಇದು ಇಂದಿನ ನಾಗರಿಕ ಸಮಾಜದಲ್ಲಿ ಅಥವಾ ಹೋಟೆಲ್ ಗಳಲ್ಲಿ ತಯಾರಿಸುವ ಉಪ್ಪಿಟ್ಟು ಅಲ್ಲ. ಈ ಉಪ್ಪಿಟ್ಟು ಯಾವುದು? ಎಂಬುದನ್ನು ಗೊರೂರರು ನಮ್ಮ ಊರಿನ ರಸಿಕರು ಕೃತಿಯಲ್ಲಿ ಹೀಗೆ ಪರಿಚಯ ಮಾಡಿ ಕೊಡುತ್ತಾರೆ. ನಮ್ಮ ಊರಿನಲ್ಲಿ ಬ್ರಾಹ್ಮಣರು , ಶೂದ್ರರು, ಸಾಹೇಬರು ಎಲ್ಲರೂ ಆರಂಬಗಾರರು. ರಾತ್ರಿ ಹಿಟ್ಟು ಬೆಳಗ್ಗೆಯ ತಿಂಡಿ. ರಾತ್ರಿ ಮಿಕ್ಕಿದ ಹಿಟ್ಟಿಗೆ ಉಪ್ಪು ಮೆಣಸು ಹಾಕಿ ಮಿದ್ದಿ ಮಾಡಿದ್ದೇ ಉಪ್ಪು + ಹಿಟ್ಟು = ಉಪ್ಪಿಟ್ಟು . ರಂಗೇಗೌಡ ನಂಥ ರೈತರಿಗೆ ಇದೇ ನಾಸ್ಟ.

'ಸೋಸುಣ್ಣುವವನಿಗೆ ಕಾಸಿ ರೋಗ' ಎಂಬ ಗಾದೆಯಂತೆ ಹಳ್ಳಿಯಲ್ಲಿ ಯಾರೂ ಸೋಸಿ ಉಣ್ಣುವುದಿಲ್ಲ. " ರೈತ ಬೆಳಗಿನಿಂದ ಹೊಲ ಉತ್ತು ಮನೆಯಿಂದ ತಂದ ಹಿಟ್ಟು ಉಂಡು ಅಥವಾ ರೊಟ್ಟಿ ತಿಂದು ಒಂದು ಮಡಕೆ ಮಜ್ಜಿಗೆ ಕುಡಿದು ಒಂದು ಚೂರು ಗೋಟಡಿಕೆ , ಒಂದು ವೀಳ್ಯೆದೆಲೆ ಹಾಕಿಕೊಂಡರೂ ದೇಹ ಚೆನ್ನಾಗಿರುತ್ತದೆ.

**ಊರೊಟ್ಟನ ಊಟ :** ಯಾವುದೇ ಒಂದು ಗ್ರಾಮದ ಗೌರವ , ಶಿಸ್ತು ಸಂಯಮ ಹಾಗೂ ಒಗ್ಗಟ್ಟು ಮುಂತಾದವುಗಳನ್ನು ಕಾಪಾಡಿಕೊಂಡು ಹೋಗಲು ಗ್ರಾಮಸ್ಥರೆಲ್ಲಾ ಸೇರಿ ಕೆಲವು ನಿಯಮಗಳನ್ನು ಮಾಡಿಕೊಂಡಿರುತ್ತಾರೆ. ಊರಿನ ಕೆಲವು ಹಿರಿಯ ವ್ಯಕ್ತಿಗಳ ನೇತೃತ್ವದಲ್ಲಿ , ತಮ್ಮ ಗ್ರಾಮದಲ್ಲಿ ಜರುಗುವ ಸಣ್ಣ ಪುಟ್ಟ ಜಗಳಗಳಿಗೆ, ಭಿನ್ನಾಭಿಪ್ರಾಯಗಳಿಗೆ ಈ ನಿಯಮಗಳ ಆಧಾರದ ಮೇಲೆ ಪರಿಹಾರವನ್ನೂ ಕಂಡುಕೊಳ್ಳುತ್ತಾರೆ. ಈ ಪರಿಹಾರಗಳಿಗೆ , ತೀರ್ಮಾನಗಳಿಗೆ ಪ್ರತಿಯೊಬ್ಬ ಗ್ರಾಮಸ್ಥನೂ ತಲೆಬಾಗಲೇಬೇಕಾಗುತ್ತದೆ. ಇಲ್ಲವಾದರೆ, ಅವನನ್ನು ಗ್ರಾಮದಿಂದಲೇ ಬಹಿಷ್ಕರಿಸುತ್ತಾರೆ. ಈ ಮಾತಿಗೆ ನಿದರ್ಶನವಾಗಿ ಗೊರೂರರ ' ವೈಯ್ಯಾರಿ' ಕಥಾಸಂಕಲನದಲ್ಲಿ ಬರುವ ಒಂದು ಸನ್ನಿವೇಶವನ್ನು ಗಮನಿಸಬಹುದು.

" ತಿಮ್ಮನು ತನ್ನ ಮದುವೆಯಲ್ಲಿ ' ಊರೊಟ್ಟನ ಊಟ' ಕೊಡಲು ನಿರಾಕರಿಸಿದ್ದ ರಿಂದ ಊರಿನ ಜನರೆಲ್ಲ ತಿರುಗಿ ಬಿದ್ದರು. ಗ್ರಾಮದ ಹಿರಿಯರು ಪೂರ್ವದಿಂದ ನಡೆದು ಬಂದ ಪರಿಪಾಷ್ಟ ಅಷ್ಟು ಸುಲಭವಾಗಿ ಬದಲಾಯಿಸುವುದಕ್ಕೆ ಆಗುವುದಿಲ್ಲ. ನೀನು ಬದಲಾಯಿಸಬೇಕೆಂದು ಹೇಳುವುದು ನೀನು ಕೊಡಬೇಕಾದ ಊಟವನ್ನು ಉಳಿಸುವುದಕ್ಕೆ ಹೊರತು ಈ ಪರಿಪಾಷ್ಟ ಹೋಗಲಾಡಿಸುವುದಕ್ಕಲ್ಲ, ಎಂಬುದಾಗಿ ಹೇಳಿ ಎಂಟು ದಿವಸ ಅವನಿಗೆ ಬೆಂಕಿ, ಬಿಸಿನೀರು ದೊರಕದಂತೆ ಮಾಡಿದರು. ಅಗಸ, ಕ್ಷೌರಿಕ, ಕಮ್ಮಾರ, ಕುಂಬಾರ, ಜೋಯಿಸರು ಅವನ ಕಡೆಗೆ ಸುಳಿಯಲಿಲ್ಲ. ಕೊನೆಗೆ ತಿಮ್ಮನು ಕೂಗಾಡುತ್ತಾ ಕೊಡಬೇಕಾದ ಊಟ ಕೊಟ್ಟನು" ಮೇಲಿನ ಉದಾಹರಣೆಯಿಂದ ' ವ್ಯಕ್ತಿಗಿಂತ ಸಮಷ್ಟಿ ಮುಖ್ಯ' ಎಂಬುದನ್ನು ಗೊರೂರರು ಎತ್ತಿ ಹಿಡಿಯುತ್ತಾರೆ.

# ಗೊರೂರರ ಪ್ರಬಂಧಗಳಲ್ಲಿರುವ ಗಾದೆಗಳು

ಗಾದೆ ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಒಂದು, ಗಾದೆಗೂ ಜೀವನಕ್ಕೂ ಅವಿನಾಭಾವ ಸಂಬಂಧವಿದೆ. ಗಾದೆಗಳು ಲೋಕೋಪಯೋಗಿ ಹಾಗೂ ನಿತ್ಯೋಪಯೋಗಿಯಾದವು. ಯಾವುದೋ ಒಬ್ಬ ವಿದ್ವಾಂಸನ ಮಾತಿನಂತೆ ಗಾದೆ " ಬೀದಿಯಲ್ಲಿ ಸಿಕ್ಕುವ ಜ್ಞಾನ', ಯಾವುದೇ ಬೇನೆಗೆ ಮದ್ದಾಗ ಬಲ್ಲ ಹಿತ್ತಲ ಗಿಡ."

ಗಾದೆ ವೇದಕ್ಕೆ ಸಮಾನ ಇದು ಗಾದೆಯನ್ನು ಕುರಿತ ಗಾದೆ. ವೇದ ಎಂದರೆ ಜ್ಞಾನ ಎಂದರ್ಥ. ವೇದ ಸುಳ್ಳಾದರೂ ಗಾದೆ ಸುಳ್ಳಾಗದು. ಎಂಬ ಗಾದೆಯೂ ಇದೆ. ಹಾಗಾಗಿ ಗಾದೆಗಳು ಎಂದಿಗೂ ತಮ್ಮ ಬೆಲೆಯನ್ನು ಕಳೆದುಕೊಳ್ಳುವುದಿಲ್ಲ. ಗಾದೆಯಿಲ್ಲದ ದೇಶವಿಲ್ಲ. ಜನಭಾಷೆಯಲ್ಲಿಯೇ ಗಾದೆಗಳು ಅಸ್ತಿತ್ವ ಪಡೆಯುತ್ತವೆ. ಆದ್ದರಿಂದಲೇ ಗಾದೆ ಜನಭಾಷೆಯ ಕೆನೆ ಜನವಾಣಿ ಬಿಟ್ಟ ಹಣ್ಣು. ಎಂಬುದಾಗಿ ಹೇಳುತ್ತಾರೆ.

ಗಾದೆಗಳ ಮುಖ್ಯ ಗುರಿ ಮಾರ್ಗದರ್ಶನ ಗಾದೆ ಭಾಷೆಯ ಒಂದು ಅವಿಭಾಜ್ಯ ಅಂಗ. ಸಾರ್ವಕಾಲಿಕ ಹಾಗೂ ಸರ್ವಾಂತರಯಾಮಿಯಾದುದು. ಗಾದೆಗಳಿಗೆ ತಮ್ಮದೇ ಆದ ಸಂಸ್ಕೃತಿ ವಿಶೇಷತೆಯಿದೆ. ಗಾದೆಗಳು ಬದುಕಿನ ಪ್ರಶ್ನೆಗಳಿಗೆ ಉತ್ತರ ನೀಡುತ್ತವೆ. ಇಂತ ವಿಶೇಷತೆಗಳಿಂದಾಗಿಯೇ ಗಾದೆಗಳು ಜನಪದ ವಿಶ್ವಕೋಶಗಳು ಎಂದೆನಿಸಿಕೊಂಡಿವೆ. ಜನಪದ ಗಾದೆಗಳನ್ನು ನೋಡಿ ಜನಾಂಗ ಎಂಥದೆಂಬುದಾಗಿಯೂ ಹೇಳಬಹುದಾಗಿದೆ. ಜನತೆ ಹೋಗೋ ಗಾದೆ ಹಾಗೆ ಎನ್ನುತ್ತದೆ ಒಂದು ವಿದೇಶಿ ಗಾದೆ. ಜನಪದರ ಆದರ್ಶ, ಜಾಣ್ಮೆ, ವ್ಯವಹಾರ ರೀತಿ ನೀತಿಗಳನ್ನು ಗಾದೆಗಳಿಂದ ಅರಿಯಬಹುದಾಗಿದೆ.

ಗಾದೆಯನ್ನು ಕುರಿತು ' ಬ್ರಿಟಾನಿಕಾ' ವಿಶ್ವಕೋಶದಲ್ಲಿ ಈ ರೀತಿಯಾಗಿ ಹೇಳಿಕೆಯೊಂದಿದೆ. "ಗಾದೆಗಳು ಆಡುಭಾಷೆಯ ಅಂಗಾಂಶಗಳು. ಜನ್ಮತಃ ಜನಪದ ಲಾವಣಿ, ಗೀತೆಗಳು ಹುಟ್ಟಿದಂತಹ ಜನಾಂಗಿಕ ಇತಿಹಾಸದ ಘಟಕಕ್ಕೆ ಸೇರತಕ್ಕವು" ಅನೇಕರ ವಿವೇಕ ಮತ್ತು ಒಬ್ಬನ ಚಾತುರ್ಯದಿಂದಾಗಿ ಗಾದೆಗಳ ಜನನವಾಗಿದೆ ಎಂಬುದಾಗಿಯೂ ಹೇಳಬಹುದು. ಗಾದೆಗಳು ಅನುಭವದಿಂದ ಬಂದವುಗಳಾಗಿವೆ. ಜ್ಞಾನ, ವಿವೇಕಗಳನ್ನು ಕೊಡುತ್ತವೆ. ಬದುಕಿನಲ್ಲಿ ಸಾಮರಸ್ಯವಿರಬೇಕು ಎಂಬುದನ್ನು ಒತ್ತಿ ಹೇಳುತ್ತವೆ. ತಪ್ಪುಗಳನ್ನು ತಿದ್ದುತ್ತವೆ. ಅತಿಯಾದುದನ್ನು ವಿಡಂಬಿಸುತ್ತವೆ. ಯಾವ ವಸ್ತುವೇ ಆಗಲಿ, ಯಾವ ವಿಷಯವೆ ಆಗಲಿ ಗಾದೆಯ ಹಿಡಿತದಿಂದ ಹೊರತಾದುವಲ್ಲ ಇಡೀ ಬದುಕನ್ನೇ ಗಾದೆಗಳು ತಮ್ಮೊಳಗೆ ಅಡಗಿಸಿಕೊಂಡಿವೆ. ಶೀಲ ಅಶ್ಲೀಲ ಎಂಬ ಭೇದ ಅವುಗಳಿಗಿಲ್ಲ ಒಂದು ಜನಾಂಗದ ಜೀವನಕಲೆಯನ್ನು ಅವು ಪ್ರತಿಬಿಂಬಿಡುತ್ತವೆ.

ಈ ಗಾದೆಗಳು ಎಲ್ಲವಿಧದ ಸಾಹಿತ್ಯದಲ್ಲಿಯೂ ಸ್ಥಾನವನ್ನು ಪಡೆದುಕೊಂಡಿವೆ. ಗೊರೂರರು ತಮ್ಮ ಕೃತಿಗಳಲ್ಲಿ ಗಾದೆಗಳನ್ನು ಔಚಿತ್ಯವರಿತು ಬಳಸಿಕೊಂಡಿದ್ದಾರೆ. ಅವರ ಪ್ರಬಂಧಗಳಲ್ಲಿ ಬರುವ ಗಾದೆಗಳನ್ನು ಆರಿಸಿ ಬರೆಯುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ.

# ಗಾದೆಗಳು

- ಅಸಿಲೆ ಮಳೆಗೆ ಸಸಿಲೆ ಬೆಟ್ಟಕ್ಕೆ ಏರಿತು
- ಬಂದರೆ ಮೆಗೆ ಹೋದರೆ ಹೊಗೆ
- ಹುಬ್ಬೆ ಮಳೆಗೆ ಗುಬ್ಬಿ ತಲೆಯು ನೆನೆಯುವುದಿಲ್ಲ
- ಉತ್ತರೆ ಮಳೆಗೆ ಉತ್ತ ಎತ್ತು ನೀರಿಗೆ ಬಿತ್ತು
- ಕುರುಡು ಚಿತ್ತಿ ಎರಚಿದತ್ತ ಬೆಳೆ
- ಹೊಳೆತನಕ ಓಟ ದೊರೆತನಕ ದೂರು
- ಹಾರುವರ ಹೊಲಕ್ಕೆ ಹಾರಕ ದೇವರ ಹೊಲಕ್ಕೆ ಹುಚ್ಚೆಳ್ಳು
- ಹೆಡ್ಡನ ಆರಂಭ ಗೊಬ್ಬರದಲ್ಲಿ
- ಬೀಸುವ ದೊಣ್ಣೆ ತಪ್ಪಿದರೆ ಸಾವಿರ ವರುಷ ಆಯಸ್ಸು
- ಹಣ್ಣಿಲ್ಲದ ಮರಕ್ಕೆ ಕಣ್ಣಿಲ್ಲದ ಗಿಣಿ ಬಂತು
- ಹನುಮಂತ ಹಗ್ಗ ಮೇಯುತ್ತಿರುವಾಗ ಪೂಜಾರಿ ಶಾವಿಗೆ ಬೇಡಿದ.
- ಅಕ್ಕಿ ಮೇಲೆ ಆಸೆ ನೆಂಟರ ಮೇಲೆ ಪ್ರೀತಿ

## ಜನಪದ ಗೀತೆಗಳು

೧) ಸ್ವಾತಿಯ ಮಳೆ ಹೊಯ್ದು
ಸೀತೆಯ ಕೆರೆ ತುಂಬಿ
ಜೋತಾಡುತಾವೆ ಕುಣಿಗಲ ಕುಚಿನ ಮೀನು
ಮುಂಗೈಯ್ಯ ನೋಡಿ ನಗುತಾವೆ.

ಮಳೆಯು ಬಂದರೆ ಬರಲಿ ಹೊಳೆಯು ತಂಬಲಿ ಬೇಡ
ಹೊಳೆಯಿಂದಲಾಚೆ ತವರೂರು/ತವರೂರು
ಹರಿಹೋಲ್ಗೆ ಬೇಕೆ ಹಿಡಿ ಹೊನ್ನು (ಹೆ.ತೀ.ಇ. ಪು. ಸಂ. ೧೧೪)

ಮೂಡ ಮುತ್ತಿನ ಗಿರಿಯೋ ಪಡುವ ಚಿನ್ನದ ಗಿರಿಯೋ
ಸೋಲಿಗರ ಸೀಮೇ ಸಿರಿಹರಿ ವೆಂಕಟ್ರಮಣ
ಸೋಲೀಸು ಬೇಡ ಗೆಲಿಸಯ್ಯ.

ಒಂಟೆಯ ಮೇಲೆ ಬರುವ ಬಂಟಾನ ನೋಡಿರೆ
ಎಂಟಾಳಿಗಿಂತ ಚೆಲುವಾನ
ಎಂಟಾಳಿಗಿಂತ ಚೆಲುವಾ ಮದವಣ್ಣನ
ಸೊಂತಾ ನೋಡಿ ಹೆಣ್ಣ ಕೊಡಿರಮ್ಮ

ಆನೆಯ ಮೇಲೆ ಬರುವಾ ಅರಸಾನ ನೋಡಿರೆ
ಆರಾಳಿಗಿಂತ ಚೆಲುವಾನ
ಆರಾಳಿಗಿಂತ ಚೆಲುವಾ ಮದವಣ್ಣನ
ತೋಳನೋಡಿ ಹೆಣ್ಣ ಕೊಡಿರಮ್ಮ. (ಅದೆ. ಪು. ಸಂ. ೧೫)

ರಂಗನ ತೇಜಿಗೆ ಹೊಂಬಾಳೆ ವಡ್ಯಾಣ

ದುಂಡು ಮಲ್ಲಿಗೆ ಮೊಕರಂಬ/ ಬೇಟ್ಗಾರ
ರಂಗನೇರ್‍ಯಾನೆ ಹೊಸತೇಜಿ
ರಂಗ ಸ್ವಾರಿ ಹೊಂಟ ನಂದಿಕೋಲವನೇರಿ
ನಿಂಬಿ ಕಿತ್ತಾಳೆ ಕಿರುನೆಲ್ಲಿ/ವನದಲ್ಲಿ
ರಂಗ ಹೆಬ್ಬುಲಿಗೆ ಗುರಿಯಿಟ್ಟ

ಹಳ್ಳಾದ ಮೇಲೊಂದು ಹುಲ್ಲೆ ಹೆಜ್ಜೆಯ ಕಂಡೆ
ಹುಲ್ಯಲ್ಲ ಕಾಣೋ ಮರಿಗುದುರೆ/ ರಂಗಯ್ಯ
ಹುಲ್ಲೆ ಬೇಟ್ಯಾಡಿ ಬರ್‍ತಾನೆ. ( ಅದೇ. ಪು. ಸಂ. ೨೯)

ಹಳ್ಳದ ನೀರಾಗೆ ತೆಳ್ಳನ್ನ ಕಲ್ಲಾಗೆ
ಚಿಲ್ಲಿ ಸಿಕ್ಕುವ ಬಿಸಿಲೀಗೆ/ರಂಗಯ್ಯ
ವಲ್ಲಿ ನಾಚ್ಯಾಗಿ ಮಡಿಯಾಗಿ

ರಂಗ ಬರುವುದು ಕಂಡೆ ಅಂಬು ಬಾಣವ ಕಂಡೆ
ತೆಂಗೀನ ಮರವ ಮರೆಗೊಂಡೆ/ ಬೇಟ್ಗಾರ
ರಂಗಪ್ಪ ಬರುವ ರಭಸೀಗೆ

ರಂಗನ್ನ ನೋಡೋಕೆ ರೇಕು ಮಾಣಿಕವೇಕೇ
ಅಂಗಯ್ಯ ತುಂಬಾ ಹಣವೇಕೆ/ಬೇಟ್ಗಾರ
ಸಿಂಗರದ ರಂಗನ್ನ ನೋಡಾಕೆ

ರಂಗ ಬರ್‍ತಾನೆಂದು ರಂಗೋಲೆ ನಾ ತಂದೆ
ರಂಗನ ಹಿಂದೆ ರಮಣೀರು / ಬರ್‍ತಾರೆಂದು
ಮಂಗಳಾರತಿ ನಾ ತಂದೆ.

ಕಂಬ ಕಂಬಕ್ಕೆ ನಿಂಬೆ ಹಣ್ಣಿನ ಪೂಜೆ
ಕಂಬ ಕಂಬಕ್ಕೆ ಮರಿದೀಪ/ ಬೇಟ್ಹಾರ
ರಂಗನ ಪೂಜೆ ದಿನದಿನ. (ಅದೆ. ಪು. ಸ. ೩೧)

ಚಂದಕ್ಕೆ ರಂಗಯ್ಯ ಚಂದ್ರಗಾವಿನುದ್ಯಾನ
ನಿಂದು ನೋಡುವನೆ ಭರತೋರು/ ತೋರಣದ
ಬಿಂದಿಗಮ್ಮ ದಣಿಕೆ ಬರುವೋದ

ಹಂಜಳಿಗೆ ಭರತೂರ ನಡುವೆ ಕೊಡಗತವಳ್ಳಿ
ನಡುಬಾಗಿ ಬಾರೆ ಬಿಂದಿಗಮ್ಮ/ ಕಳಸಾದ
ಕೊನೆ ತಗುಲಿ ಮುತ್ತು ಸಡಿಲಾವು.

ಬೆಂಕಿಪಟ್ಟಣದಿಂದ ವಂಕಿ ಬಳಿ ಬಂದೊ
ನಮ್ಮ ನಾಡಲಿ ಬಳೆಯಿಲ್ಲಾ
ನಮ್ಮ ನಾಡಲಿ ಬಳೆಯಿಲ್ಲಾ ಬಳೆಗಾರ
ಸಾರಿಕೊಡ್ಹೋಗೊ ತವರೀಲಿ

ಹಂಚಿನ ಮನೆ ಕಾಣೊ ಕಂಚಿನ ಕದ ಕಣೊ
ಇಂತಾಡುವೆರಡು ಗಿಣಿ ಕಾಣೊ
ಇಂತಾಡುರೆರಡೆ ಗಿಣಿ ಕಾಣೊ ಬಳೆಗಾರ
ಅದೆ ಕಾಣೊ ಅಣ್ಣ ತವರೂರು.

ಅಲ್ಯಾಡುತಾವೆ ಗಾಣವೆ ತಿರುಗಾವೆ

ಪರ್ವಾದ ಪಕ್ಷಿ ಪಗಡೆಯು
ಪರ್ವಾದ ಪಕ್ಷಿ ಪಗಡೆಯನಾಡುತಾವೆ
ಅದೆ ಕಾಣೊ ಅಣ್ಣ ತವರೂರು.

ಬಾಣಂತಿ ಹಟ್ಟೀಲಿ ಬಾಳೆಯ ಚಪ್ಪರ
ಬಾಗಿ ಬಾರಯ್ಯ ಬಳೆಗಾರನಣ್ಣಯ್ಯ
ಬಾಣತಿಗೆ ಬಳೆಯ ತೊಡ ಬರೊ.

ಮುತ್ತೈದೆ ಹಟ್ಟೀಲಿ ಮುತ್ತಿನ ಚಪ್ಪರ
ಸುತ್ತಿ ಬಾರಯ್ಯ ಬಳೆಗಾರ
ಸುತ್ತಿ ಬಾರಯ್ಯ ಬಳೆಗಾರನಣ್ಣಯ್ಯ
ಮುತ್ತೈದೆ ಬಳೆಯ ತೊಡಬಾರೊ

ನಮ್ಮಣ್ಣನ ಮನೆಗೆ ಹೆಣ್ಣಿಗ್ಹೋದೆ ಅತ್ತಿಗಮ್ಮ
ಸುಣ್ಣದ ಗೋಡೆ ಒರಗಿದೆ
ಸುಣ್ಣದ ಗೋಡೆ ಒರಗಿದೆ ಅತ್ತಿಗಮ್ಮ
ಹೆಣ್ಣನ್ನು ಕೊಡೆ ಮಗನೀಗೆ

ಹೆಣ್ಣೀಗೆ ಬರುವವಳು ನೆನ್ನೆನ ಮಾಡುತಿದ್ದೆ
ನಿನ್ನೊಬ್ಬ ಸೀಮೆ ದೊರೆ ಮಗ
ನಿನ್ನೊಬ್ಬ ಸೀಮೆ ದೊರೆ ಮಗ ಬಂದಿದ್ದ
ಬಣ್ಣಡಿಸಿ ಬಳಿಯ ತೊಡಿಸ್ಹೋದ.

ನೀರ ಮೇಲೆ ನೀರು ನೀರಿಂದಾಚೆ ತಾವರೆ
ತಾವರಿಂದಾಚೆ ತವರೂರು
ತಾವರಿಂದಾಚೆ ತವರೂರು ಹೋದರೆ

ತಿರುಗಿ ಬರುವುದಕೆ ಮನಸ್ಸಿಲ್ಲ

ಅಕ್ಕ ತಂಗಿಯರು ಕಟ್ಟೆ ನೀರಿಗೆ ಹೋಗಿ
ಅಲ್ಲಿ ನೋಡೆ ಅಕ್ಕ ತವರೂರು
ಅಲ್ಲಿ ನೋಡೆ ಅಕ್ಕ ತವರೂರು ಬೀದಿಯ
ಹೂವಿನ ತೇರು ಹರಿದಾವೆ.

ಹರಿದರೆ ಹರಿಯಲೆ ಮುರಿದರೆ ಮುರಿಯಲೆ
ನಾವೊಬ್ಬರಾ ಮನೆಯ ಸೊಸೆಯಾದೊ
ನಾವೊಬ್ಬರಾ ಮನೆಯ ಸೊಸೆಯದೊ ತಂಗ್ಯಮ್ಮ
ತವರೂರು ಸುದ್ದಿ ನಮಗೇನೆ

ಅಂದಕರ್‍ಯಲಗೂಡು ಚೆಂದಕ್ಕೆ ನರಸೀಪುರ
ಚಿತ್ತರದ ಗೊಂಬೆ ಗೊರವೂರು
ಚಿತ್ತರದ ಗೊಂಬೆ ಗೊರುವೂರು ಬೀದಿಯ
ಹದಿನಾರು ತೇರು ಹರಿದಾವೆ. ( ಗ.ಗ. ದಾ. ಪು. ಸಂ. ೫೬)

ತೇರು ಹರಿದಾವ್ರೊ ತಾನಕ್ಕೆ ನಿಂತಾವ್ರೊ
ತಾರೋ ಚೆನ್ನಯ್ಯ ಜವನವ
ತಾರೋ ಚನ್ನಯ್ಯ ಜವನದ ಬಾಳೆಹಣ್ಣು
ಬೇಡಿಕೊಳ್ಳೆ ಮಗಳೆ ಸೆರಗೊಡ್ಡಿ

ತೇರಿಗ್ಹೋಗೋಣ ಬನ್ನೀರೆ ಸ್ವಾಮಿ ರಥಾಕ್ಹೋಗೋಣ ಬನ್ನೀರೆ/
ನೋಟಾಕೆ ಚೆಂದ್ವಂತೆ ಮೊಣವಿನ ಕೆರೆಯಂತೆ ಕೋಟೆಯ ಬುಡದ ಬೇಟೆರಾಯ್ನಂತೆ
ಅಯ್ಗೋಳ ಗುಡಿಯಲ್ಲಿ ಏನೇನು ಅಡ್ಗೆ ಊಟ ಉದ್ದು ಮತ್ತೆ ಪನಿವಾರ
ನೆನೆಯಕ್ಕಿ ನೆನೆಗಡಲೆ ಪನಿವಾರ ನಮ್ಮ ಮುದ್ದು ನರಸಿಂಹನ ಗುಡಿಯಾಗೆ

ಹಾರುವರ ಕೇರಿಯ ತೇಗದ ತೇರು ಯಾರ್‍ಯಾರು ನೂಕಿದ್ರು ಮಲಕೊಲ್ಲ
ಯಾರ್‍ಯಾರು ನೂಕಿದ್ರು ಮಲಕದ ತೇರು ಗೊರವೂರ ಹೊಲೆಯರು
ಮುಟ್ಟಿದ್ರೆ ನಲಿಯುವ-ಶೇರಿ

ಹಸುಗೂಸು ಹುಟ್ಟಲಿ ಹೊಸಪೇಟೆ ಕಟ್ಟಲಿ
ರಸಬಾಳೆ ಕಬ್ಬು ಬೆಳೆಯಲಿ
ರಸಬಾಳೆ ಕಬ್ಬು ಬೆಳೆಯಲಿ- ನಮ್ಮೂರ
ಬಸವನ ತೇರು ಎಳೆಯಲಿ

ಮಡದಿಯನು ಬಡಿದಾನು ಮನದೊಳಗೆ ಮರುಗಿದನು
ಒಳಗ್ಹೋಗಿ ಕಾಲ ಹಿಡಿದಾನು
ಒಳಗ್ಹೋಗಿ ಕಾಲ ಹಿಡಿದು ತಾ ಕೇಳಿದನು
ನಾ ಹೆಚ್ಚೊ ನಿನ್ನ ತವರ್‍ಹೆಚ್ಚೊ

ಬೇಸಿಗೆಯ ಬಿಸಿಲಿಗೆ ಬೇವಿನಮರ ತಂಪು
ಹೇಮಾವತಿ ಎಂಬ ನದಿ ತಂಪು
ಹೇಮಾವತಿ ಎಂಬ ನದಿ ತಂಪು ಶೀನಪ್ಪ
ನೀನಿರಲು ತಂಪು ನಮೂರ್‍ಗೆ.

# ಸಾಹಿತ್ಯಿಕ ಪ್ರಮುಖ್ಯತೆ.

ಯಾವುದೇ ಲೇಖಕ, ಅವನ ಬರಹ ಇಡೀ ಸಾಹಿತ್ಯ ವಾಙ್ಮಯದಲ್ಲಿ ಒಂದು ಒಳ್ಳೆಯ ಸ್ಥಾನಮಾನ ಪಡೆದುಕೊಳ್ಳಬೇಕಾದರೆ ಆ ಬರಹ ಸತ್ವಯುತವಾಗಿರಬೇಕು. ಜನರ ಮನಸ್ಸನ್ನು ಆಕರ್ಷಿಸುವಂತಿರಬೇಕು ತಮ್ಮ ಸಾಹಿತ್ಯದ ಮೂಲಕ ಸಮಾಜದ ಬದಲಾವಣೆಗೆ / ಸಮಸ್ಯೆಗೆ ಸ್ಪಂದಿಸುವಂತಿರಬೇಕು ಆಗ ಮಾತ್ರ ಅದು ಇಡೀ ಸಾಹಿತ್ಯದಲ್ಲಿ ಉಳಿದು ಶಾಶ್ವತ ಸ್ಥಾನ ಮಾನ ಪಡೆದುಕೊಳ್ಳಲು  ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಗೊರೂರರ ಸಾಹಿತ್ಯಿಕ ಪ್ರಾಮುಖ್ಯತೆ ಯಾವ ರೀತಿಯದು ಎಂಬುದನ್ನು ಇನ್ನು ಮುಂದೆ ಪರಿಶೀಲಿಸಬಹುದಾಗಿದೆ.

ಕನ್ನಡದ ಶ್ರೇಷ್ಠ ಲೇಖಕರಲ್ಲಿ ಗೊರೂರರು ಒಬ್ಬರು ಕನ್ನಡ ಗದ್ಯ ಸಾಹಿತ್ಯಕ್ಕೆ ಗ್ರಾಮ ಜೀವನದ ಸತ್ವವನ್ನು ತುಂಬ ವೈವಿದ್ಯತೆಯನ್ನು ಸಾಧಿಸಿದವರು ಗ್ರಾಮ ಜೀವನದ ದಟ್ಟ ಅನುಭವಧ ಜನಪದದ ಸೊಗಸನ್ನು ತಮ್ಮ ಎಲ್ಲಾ ಕೃತಿಗಳಲ್ಲಿಯೂ ತಂದವರು ಆದ್ದರಿಂದಲೇ ಇವರನ್ನು ಗ್ರಾಮೀಣಾ ಸಂಸ್ಕೃತಿಯ ಜೀವಂತ ಪ್ರತಿನಿಧಿ ಎಂಬುದಾಗಿ ಕರೆಯಬಹುದಾಗಿದೆ. ಗೊರೂರರು ತಮ್ಮ ಮೂಲ ಜೀವನದಿಂದ ಹೊರಬರದೆ ತಾವು ಬದುಕಿದ ಸಮಾಜದ ಜನಪದ ನಾಯಕನಾಗಿ ಸಾಹಿತ್ಯ ರಚನೆ ಮಾಡಿದವರು ತಮ್ಮ ಬರವಣಿಗೆಯಲ್ಲಿ ತಾವು ಬಾಳಿ ಬದುಕಿದ ಪರಿಸರವನ್ನು ಪುನರ್‌ಸೃಷ್ಟಿಸಿದ್ದಾರೆ ತಾವೂ ಪ್ರಕೃತಿಯ ಒಂದು ಭಾಗವಾಗಿ ಹೇಮಾವತಿಯಲ್ಲಿ ಗೊರೂರರೂ , ಗೊರೂರರಲ್ಲಿ ಹೇಮಾವತಿಯು ನಿರಂತರವಾಗಿ ಹರಿಯುವುದರ ಜೊತೆಗೆ ಸುತ್ತಲಿನ ಜನರಿಗೆ ಹೇಮಾವತಿ ಹೇಗೆ ಜೀವನಾಡಿಯಾಗಿದ್ದಾಳೆ ಎಂಬುದನ್ನು ತಮ್ಮ ಸಾಹಿತ್ಯದಲ್ಲಿ ಮನಗಾಣಿಸಿದ್ದಾರೆ.

ಗೊರೂರನ್ನು ಶಿಷ್ಟ ಸಾಹಿತಿ ಎನ್ನುವುದಕ್ಕಿಂತಲೂ ಮಿಗಿಲಾಗಿ ಅವರರೊಬ್ಬ ಜಾನಪದ ಸಾಹಿತಿ ಎಂದೇ ಕರೆಯಬಹುದು. ಆದ್ದರಿಂದಲೇ ಗೊರೂರರು ತಮ್ಮ ಬರವಣಿಗೆಯ ಜೊತೆ ಜೊತೆಯಲ್ಲಿ ಪರಿಸರವನ್ನೂ ಸೇರಿಸಿಕೊಂಡು ಅದರಲ್ಲಿರುವ ಅರೆಕೋರೆಗಳನ್ನು ತಿದ್ದುವ ಪ್ರಯತ್ನವನ್ನು ಮಾಡಿದ್ದಾರೆ.

ಗೊರೂರರು ಸಾಹಿತ್ಯ ಸೃಷ್ಟಿಸಿಕೊಟ್ಟಿದ್ದಾರೆ ಎನ್ನುವುದಕ್ಕಿಂತಲೂ ಹೆಚ್ಚಾಗಿ ಅವರು ತಮ್ಮ ಸುತ್ತಮುತ್ತಲಿನ ಜನ ಜೀವನವನ್ನು ಸೃಷ್ಟಿಸಿ ತೋರಿಸಿದ್ದಾರೆ ಎಂದರೆ ಹೆಚ್ಚು ಸೂಕ್ತವಾಗುತ್ತದೆ. ಅವರ ಈ ಬರವಣಿಗೆ ಸರಳ , ಸುಂದರವಾದದ್ದು , ನೀತಿಪರವಾದದ್ದು ಮತ್ತು ಸಂಸ್ಕೃತಿ ಪರವಾದದ್ದು ಎಂಬುದಾಗಿ ಹೇಳಬಹುದು.

ಇವೆಲ್ಲವುಗಳ ಜೊತೆಗೆ ಗೊರೂರರು ಗಾಂಧೀಜಿಯವರಿಂದ ಪ್ರಭಾವಿತರಾಗಿದ್ದರು ಎಂಬುದು ಬಹಳ ಮುಖ್ಯವಾದ ವಿಷಯ ಗಾಂಧೀಜಿಯವರ ತತ್ವಗಳನ್ನು ಚಿಂತನೆಗಳನ್ನು ತಮ್ಮಲ್ಲಿ ಅಳವಡಿಸಿಕೊಂಡು ಹಾಗೆಯೇ ಬದುಕಲು ಪ್ರಯತ್ನಿಸಿದವರು. ಬರವಣಿಗೆಯಲ್ಲಿಯೂ ಅವರ ತತ್ವಗಳನ್ನು ಅಳವಡಿಸಿಕೊಂಡವರು ಹಾಗಾಗಿಯೇ ಅವರ ಬರವಣಿಗೆಯಲ್ಲಿ ಯಾವುದೇ ಜಾತಿಯ ಬಗೆಗೆ ನಿಂದನೆಯಾಗಲಿ ಒಲವಾಗಲಿ ಕಂಡುಬರುವುದಿಲ್ಲ ಎಲ್ಲವನ್ನೂ ಸಹ ಒಂದೇ ಮನಸ್ಸಿನಿಂದ ಕಾಣುವ ದೊಡ್ಡತನವನ್ನು ಅವರಲ್ಲಿ ಗುರುತಿಸಬಹುದಾಗಿದೆ.

ಗೊರೂರರು ತಮ್ಮ ಕೃತಿಗಳಲ್ಲಿ ಅವರ ಕಾಲದ ಜನ ಜೀವನದ ವಿಧಾನ ಮತ್ತು ಅಲ್ಲಿಯ ಪರಿಸರವನ್ನು ಕಟ್ಟಿಕೊಡುವ ಸಾಹಿತ್ಯಕ, ಸಾಂಸ್ಕೃತಿಕ ದಾಖಲೆಗಳನ್ನು ನೀಡುತ್ತಾರೆ. ಅವರ ಸಾಹಿತ್ಯದಲ್ಲಿ ನದಿಯೇ ನಾಯಕಿಯಾಗಿ ಪಾತ್ರವಹಿಸುತ್ತಾಳೆ. ಅವರ ಹಳ್ಳಿ ಕರ್ನಾಟಕದ ಜನ ಜೀವನ ಸಾಹಿತ್ಯ , ಸಂಸ್ಕೃತಿ, ಬದುಕು , ಭಾಷೆಗಳನ್ನು ಪ್ರತಿನಿಧಿಸುವ ಉತ್ತಮವಾದ ಮಾದರಿ ಹಳ್ಳಿಯಾಗಿ ಕಂಡುಬರುತ್ತದೆ. ಈ ಮೂಲಕ ಅವರು ಒಂದು ಉತ್ತಮ ಸಾಹಿತ್ಯ ಮಾದರಿಯನ್ನು ತೋರಿಸಿಕೊಡುತ್ತಾರೆ. ಗೊರೂರರ ಸಾಹಿತ್ಯದಲ್ಲಿ ಹಬ್ಬ , ಜಾತ್ರೆ, ಮದುವೆ, ಕೃಷಿ ಮುಂತಾದ ನಿತ್ಯ ಜೀವನದ ಸಾಂಸ್ಕೃತಿಕ ವಿವರಗಳೇ ಹೆಚ್ಚಾಗಿ ಕಂಡುಬರುತ್ತವೆ. ಆದ್ದರಿಂದ ಅವರೊಬ್ಬ ಸಂಸೃತಿನಿಷ್ಠ ಬರಹಗಾರರು ಎಂಬುದಾಗಿ ಹೇಳಬಹುದು.

ಗೊರೂರರು ಯಾವುದೇ ಒಂದು ಸಿದ್ಧಾಂತಕ್ಕೆ ಮೌಲ್ಯಗಳಿಗೆ ಒಳಗಾಗುವುದಿಲ್ಲ ತಮ್ಮ ಸುತ್ತಲಿನ ಸಾಮಾಜಿಕ ವ್ಯವಸ್ಥೆಯನ್ನು ಆತ್ಮೀಯತೆಯಿಂದ ಚಿತ್ರಿಸುತ್ತಾರೆ ಗ್ರಾಮೀಣತೆಯ ಜೀವನ ಪದ್ಧತಿಯ ಸರಳ ಸೌಂದರ್ಯವನ್ನು ಸೂಕ್ಷ್ಮವಾಗಿ ಕಂಡು ಸಹಜವಾಗಿ ಚಿತ್ರಿಸುತ್ತಾರೆ ಕಲ್ಪನೆಗೆ ಇವರ ಸಾಹಿತ್ಯದಲ್ಲಿ ಅವಕಾಶವೇ ಇರುವುದಿಲ್ಲ

ಗೊರೂರರು ಗ್ರಾಮೀಣ ಜೀವನದ ಮಿತಿಗಳನ್ನು ಒತ್ತಿ ಹೇಳುವುದರ ಜೊತೆಗೆ ಆ ಮಿತಿಗಳನ್ನು ದಾಟಿ ಬರಲು ಪ್ರೇರಣೆಯನ್ನು ನೀಡುತ್ತಾರೆ. ಆದ್ದರಿಂದಲೇ ಗೊರೂರರು ಒಬ್ಬ ಸಾಹಿತಿ ಮಾತ್ರವಲ್ಲದೆ ಜನಪದ ಆಶಯಗಳನ್ನು ಪುನರ್ ನಿರ್ಮಿಸಿಕೊಡುವ ಜಾನಪದ ಚಿಂತಕರೂ ಆಗಿದ್ದಾರೆ. ಇದಕ್ಕೆ ಬಂದಿಗಮ್ಮನ ಜಾತ್ರೆ, ಯೋಗಾನರಸಿಂಹ ಸ್ವಾಮಿ ಜಾತ್ರೆ ಮುಂತಾದ ಪ್ರಬಂಧಗಳನ್ನು ನೋಡಬಹುದಾಗಿದೆ. ಗ್ರಾಮೀಣ ಜನರ ನಾಟಕ ಕಲಿಯುವ ಪ್ರವೃತ್ತಿ, ಹಬ್ಬದ ಆಚಾರ ವಿಚಾರ, ಜನರ ಊಟೋಪಚಾರಗಳ ವಿಧಾನ, ಜನರಿಗೆ ಇರುವ ಅಡ್ಡಹೆಸರುಗಳ ಪ್ರಾಮುಖ್ಯತೆ ಮುಂತಾದ ವಿಚಾರಗಳನ್ನು ಎಳೆ ಎಳೆಯಾಗಿ ವಿವರಿಸುತ್ತಾರೆ.ಗೊರೂರ ಪ್ರಬಂಧಗಳನ್ನು ಗಮನಿಸಿದಾಗ ಅವರು ಸಮಾಜದ ಜೊತೆಗೆ ನೇರವಾಗಿ ಮಾತನಾಡುತ್ತಿರುವಂತೆ ಕಂಡುಬರುತ್ತದೆ. ಅವರು ಶಿಷ್ಟಸಾಹಿತಿಗಳ ಹಾಗೆ ಸಾಹಿತ್ಯಕ್ಕಾಗಿ ಸಾಹಿತ್ಯರಚನೆ ಮಾಡುವುದಿಲ್ಲ ಅವರು ಜನರ ಸಾಹಿತಿಯಾಗಿ ಜನರಿಂದ ಜನರಿಗಾಗಿಯೇ ಬದುಕಿ ಬರೆದವರು. ಸಾಮಾನ್ಯ ಜನರೊಂದಿಗೆ ಮುಖಾ ಮುಖಿ ಯಾಗುವುದೇ ಅವರ ಸಾಹಿತ್ಯದ ವೈಶಿಷ್ಟ್ಯ. ಅವರು ಪ್ರಬಂಧ ರಚನೆಯಲ್ಲಿಯೂ ಕೂಡ ಸಾಹಿತ್ಯಿಕ ಸ್ವಾರಸ್ಯವನ್ನು ಪ್ರಧಾನವಾಗಿ ಹೇಳುತ್ತಾರೆ. ಕಥೆಯೋಳಗೆ ಪ್ರಬಂಧವನ್ನು, ಪ್ರಬಂಧದೊಳಗೆ ಕಥೆಯನ್ನು ಹೆಣೆಯುತ್ತಾರೆ.

" ಗೊರೂರು ತಮ್ಮ ಕಥೆಗಳು ಮತ್ತು ಪ್ರಬಂಧಗಳ ಬಗ್ಗೆ ಹೇಳುವಾಗ ಅವುಗಳ ಒಳಗೆ ಒಂದು ಉದಾರಮನಸ್ಸು ಮಾತನಾಡುವಂತೆ ತೋರುತ್ತದೆ. ಇದು ಪೂರಾ ನೈತಿಕವಾದ ಮನಸ್ಸು. ಈ ನೈತಿಕತೆ ಭಾರತೀಯ ಸ್ವಭಾವದ್ದು ಎಂದು ನಾವು ಹೇಳಬಹುದು. ಅವರ ಈ ಭಾರತೀಯ ಸ್ವಭಾವದಲ್ಲೂ ನೈತಿಕತೆಯ ಉಜ್ವಲ ಅಪೇಕ್ಷೆಗಳು ಕಾಣುತ್ತವೆ. ಅವುಗಳ ಮೌಲಿಕ ಚಿಂತನೆ ಹಿಂದೂ

ಮತ್ತು ಭಾರತೀಯ ಪರವಾದದ್ದು. ಅವರ **'ಕನ್ನಡ ಮೌಲ್ವಿ** 'ಎಂಬ ಪ್ರಬಂಧವೇ ಇದಕ್ಕೆ ಉತ್ತಮ ಉದಾಹರಣೆ.ಒಬ್ಬ ಮುಸ್ಲಿಂ ಮೌಲ್ವಿಯಲ್ಲಿ ಅವರು ಕಾಣುವ ಆದರ್ಶ ಅವನು ಚೆನ್ನಾಗಿ ಕಲಿತಿದ್ದಾನೆ ಮತ್ತು ಹಿಂದೂ ಸಂಸ್ಕೃತಿ ಮೌಲ್ಯಕ್ಕೆ ಬದ್ಧನಾಗಿದ್ದಾನೆ ಹಾಗೂ ಆಕರ್ಷಿತನಾಗಿದ್ದಾನೆ. ಒಬ್ಬ ಮುಸಲ್ಮಾನ ಕನ್ನಡ ಕಲಿತು ಹಿಂದೂ ಸನ್ಯಾಸಿಯಂತೆ ಮಾತನಾಡುತ್ತಾನೆ ಎನ್ನುವುದು ಗೊರೂರರಿಗೆ ಇಷ್ಟವಾದ ಸಂಗತಿ".*

ಹಾಗೆಯೇ ಅವರ ಪ್ರಬಂಧಗಳಲ್ಲಿ ಕಂಡುಬರುವ ಶಾಲುಸಾಬ ಹುಸೇನ್ ಸಾಬ ಮುಂತಾದ ಮುಸ್ಲಿಂರಲ್ಲಿ ಅವರು ಕಾಣುವ ಆದರ್ಶ, ಆತ್ಮೀಯತೆ , ಧರ್ಮಸಹಿಷ್ಣುತೆಗಳು ಗೊರೂರ ಸಾಹಿತ್ಯಕ ಶ್ರೇಷ್ಠತೆ ಎಂಬುದಾಗಿ ಹೇಳಬಹುದಾಗಿದೆ.

ಗೊರೂರರು ತಮ್ಮ ಸಾಹಿತ್ಯರಚನೆಯಲ್ಲಿ ಎಲ್ಲೂ ಸಮಸ್ಯೆಗಳನ್ನು ಮುಖಾ - ಮುಖಿ ಯಾಗಿಸುವುದಿಲ್ಲ ತಮಗೆ ಗೋಚರವಾಗುವ ಜನರ ಬದುಕನ್ನು ಮುಖ್ಯ - ಅಮುಖ್ಯ ಎನ್ನದೆ ಎಲ್ಲವನ್ನು ವಾಸ್ತವಿಕ ನೆಲೆಗಟ್ಟನಲ್ಲಿಯೇ ವಿವರಿಸುತ್ತಾರೆ. ಜನರ ನಿಷ್ಠೆ, ಜಾತಿ ಭೇದಗಳನ್ನು ಮೀರಿದ ಮಾನವೀಯ ಮೌಲ್ಯ ಜೀವನದ ಸರಳತೆ ಶ್ರದ್ಧೆ ಜನಜೀವನದ ಪ್ರಧಾನ ಸಂದರ್ಭ ಮುಂತಾದವುಗಳ ವಿವರಗಳು ಹೇರಳವಾಗಿ ದೊರೆಯುತ್ತವೆ.

ಗೊರೂರರು ಸಂಪ್ರದಾಯವನ್ನು ಪೂರ್ಣವಾಗಿ ವಿರೋಧಿಸದೆ ಅರ್ಥವಿಲ್ಲದ ಆಚರಣೆಗಳ ಬಗಗೆ ವಿಡಂಬನೆಯನ್ನು ವ್ಯಕ್ತಪಡಿಸುತ್ತಾರೆ. " ಬ್ರಾಹ್ಮಣರು ಮಡಿಯಲ್ಲಿದ್ದಾಗ ಏನು ಸೋಕಿದರೂ ಮೈಲಿಗೆಯಗುತ್ತದೆ. ಹಾಗೆಯೇ ಮೈಲಿಗೆಯಲ್ಲಿದ್ದಾಗ ಮಡಿಬಟ್ಟೆ ಮುಂತಾದ ಪದಾರ್ಥಗಳನ್ನು ಮುಟ್ಟುವುದಿಲ್ಲ ಅಯ್ಯಂಗಾರರು ಮೈಲಿಗೆಯಲ್ಲಿದ್ದರೂ ಮಡಿಬಟ್ಟೆಯನ್ನು ಕೋಲಿನಿಂದ ತೆಗೆದುಕೊಂಡರೆ ದೋಷವಿಲ್ಲ ಎಂದು ಭಾವಿಸುತ್ತಾರೆ. ಅಯ್ಯಂಗಾರರ ಈ ನಡವಳಿಕೆ 'ಕೋಲುಮಡಿ' ಎಂದೇ ಪ್ರಸಿದ್ಧವಾಗಿತ್ತು "

---

*ಗೊರೂರರ ಜೀವನ ಸಾಧನೆ ಪುಟ ಸಂಖ್ಯೆ ೨೨

ಹೀಗೆ ನವುರಾದ ಹಾಸ್ಯದ ಮೂಲಕ ವ್ಯಂಗ್ಯತೆಯನ್ನು ತಂದು ವಿಡಂಬಿಸುತ್ತಾರೆ. ಹಾಗೆಯೇ ಶಕುನ ನೋಡುವುದರ ಬಗೆಗೂ ವ್ಯಂಗ್ಯ ಹಾಸ್ಯವನ್ನು ತಂದಿದ್ದಾರೆ. ಇವರಸಾಹಿತ್ಯದಲ್ಲಿ ಅಹಂಭಾವಕ್ಕೆ ಆಸ್ಪದವೇ ಇಲ್ಲ , ಅಹಂಭಾವವನ್ನು ಕರಗಿಸಿಬಿಡುವ ಪಾತ್ರಗಳನ್ನು ಕಾಣಬಹುದು. ಬೆಸ್ತರ ಕರಿಯ ಅವನೊಬ್ಬ ಯೋಗಿ ಸುಖ- ದುಖಃಗಳಲ್ಲಿ ಹಿಗ್ಗದೆ ಕುಗ್ಗದೆ ಸಮಚಿತ್ತದಿಂದ ಇರುವವನು.ಹಾಗೆಯೇ ತೂರ ತಾನು ಸದ್ದಾಳಾದರು ಊರಿನವರೆಲ್ಲರ ದನಕರುಗಳನ್ನು ಮೇಯಿಸಿಕೊಂಡು ಬರುತ್ತಾನೆ. ಯಾರಾದರೂ ಬೈದರೆ ಅದಕ್ಕೆ ಕಿವಿಗೊಡದೆ ತನಗೆ ಸಂಬಂಧವಿಲ್ಲ ವೆಂಬಂತೆ ಇರುತ್ತಾನೆ ಒಂದು ಸಂಧರ್ಭದಲ್ಲಿ ಇವರಿಗೆ ತೂರನ ಅವಶ್ಯಕತೆಯನ್ನು ತೋರಿಸಿಕೊಡುತ್ತದೆ. ತನ್ನ ಅವಶ್ಯಕತೆ ಊರಜನರಿಗೆ ಎಷ್ಟಿದೆ ಎಂಬುದು ತಿಳಿದರೂ ತೂರ ಅಹಂಭಾವ ಪಡುವುದಿಲ್ಲ ಕರಿಯನಂತೆಯೇ ಯೋಗಿಯಾಗಿ ಕಂಡುಬರುವ ವೆಂಕಟರಾಯರು ಕಾಯಕದಲ್ಲಿಯೇ ಭಗವಂತನನ್ನು ಕಂಡು ಊರಿಗೆ ಉಪಕಾರ ಮಾಡಿ ಆ ಮೂಲಕ ಜೀವನದ ಸಫಲತೆಯನ್ನು ಕಂಡು ಕೊಂಡವರು ಇಂತಹ ಪಾತ್ರಗಳ ಬಗೆಗೆ ಚಿಂತಿಸುವಾಗ ನಮ್ಮಲ್ಲಿರುವ ಅಹಂಕೂಡ ಮರೆಯಾಗುತ್ತದೆ. ಅಂತಹ ಪರಿಣಾಮಕಾರಿಯಾದ ಪಾತ್ರಗಳನ್ನು ಗೊರೂರರು ಪರಿಚಯಿಸುತ್ತಾರೆ. ತಮ್ಮ ಸಾಹಿತ್ಯ ಕೃತಿಗಳ ಮೂಲಕ ಮಾನವೀಯತೆಯನ್ನು ಎತ್ತಿಹಿಡಿಯುವ ಪ್ರಯತ್ನವನ್ನು ಮಾಡುತ್ತಾರೆ.

ಗೊರೂರರು ಗಮನ ಹೆಚ್ಚಾಗಿ ಘಟನೆಗಳ ನಿರೂಪಣೆಯ ಕಡೆಗೇ ಹರಿಯುತ್ತದೆ. **'ನಮ್ಮ ಊರಿನ ರಸಿಕರು' ' ಹಳ್ಳಿಯ ಚಿತ್ರಗಳು'** ಪ್ರಬಂಧಗಳಲ್ಲಿ ಕಂಡು ಬರುವ ಘಟನೆಗಳ ನಿರೂಪಣೆಯ ರೀತಿಯನ್ನು ಗಮನಿಸಿದರೆ ಚೆನ್ನಾಗಿ ತಿಳಿದುಬರುತ್ತದೆ. ಹೀಗೆ ಅವರು ಚಿತ್ರಿಸಿರುವ ಗ್ರಾಮೀಣ ಬದುಕು ತನ್ನದೇ ಆದ ಆಕರ್ಷಣೆಯಿಂದ ಓದುಗರನ್ನು ತನ್ನತ್ತ ಸೆಳೆದುಕೊಳ್ಳುತ್ತದೆ. ಸಾಮಾನ್ಯ ಜೀವನದಲ್ಲಿ ಸಹಾನುಭೂತಿ, ವರ್ಣನೆಯ ರೀತಿಯಲ್ಲಿ ಸ್ವಚ್ಛವೂ , ಲಲಿತವೂ ಆದ ಸ್ವಾಭಾವಿಕತೆ, ಹಾಸ್ಯ ವಿನೋದಾವಕಾಶಗಳಲ್ಲಿ ಮರ್ಯಾದೆ ಮರೆಯದ ಕುತೂಹಲ ಈ ಗುಣಗಳಿಂದ ಅವರ ಪುಸ್ತಕಗಳು ನಮ್ಮ ಹೊಸ ಸಾಹಿತ್ಯದಲ್ಲಿ ಮೇಲ್ತರಗತಿಗೆ ಸೇರತಕ್ಕುವಾಗಿವೆ.

# ಉಪಸಂಹಾರ

ಕನ್ನಡ ನವ್ಯೋದಯ ಕಾಲದ ಪ್ರಮುಖ ಹಾಗೂ ಪ್ರಸಿದ್ಧ ಕವಿಗಳಲ್ಲಿ ಒಬ್ಬರಾದ ಗೊರೂರು ರಾಮಸ್ವಾಮಿ ಅಯ್ಯಂಗಾರ್‌ರವರು ಗ್ರಾಮೀಣ ಬದುಕಿನ ವಿವಿಧ ಮುಖಗಳನ್ನು, ಜನಜೀವನದ ವಿಶಿಷ್ಟ ಸಂಪ್ರದಾಯಗಳನ್ನು ಸಹಜ ಸುಂದರವಾಗಿ ವರ್ಣಿಸಿ ಜನಮನವನ್ನು ಸೂರೆಗೊಂಡವರು.

ಗೊರೂರರ ಬರವಣಿಗೆ ಬಹಳ ಅಪರೂಪದ್ದು ಎಂಬುದಾಗಿಯೇ ಹೇಳಬಹುದು. ಒಂದು ಗ್ರಾಮದ ಜೀವನ ಸಮಸ್ತವಾಗಿ ಅವರ ಕೃತಿಗಳಲ್ಲಿ ಚಿತ್ರಿತವಾಗಿದೆ. ಅವರ ಸಾಹಿತ್ಯದಲ್ಲಿ ಹಾರುವ, ಹಜಾಮ, ಬ್ರಾಹ್ಮಣ, ಒಕ್ಕಲಿಗ ಎಲ್ಲರೂ ಸಹ ಜಾತಿ ಮತ- ಭೇದಗಳನ್ನು ಮರೆತು ಒಂದಾಗುವುದನ್ನು ಕಾಣಬಹುದುದಾಗಿದೆ. ವೈವಿಧ್ಯಮಯವಾದ ಪಾತ್ರಗಳು ಅವುಗಳಲ್ಲಿ ಕಂಡುಬರುವ ಗುಣವಿಶೇಷಗಳು ಮಹತ್ವಪೂರ್ಣವಾದವುಗಳು ಹಳ್ಳಿಯಲ್ಲಿ ಹುಟ್ಟಿ ಬೆಳೆದು ಆ ಜನರ ನಡುವೆ ಎಲ್ಲರಂತೆ ಒಂದಾಗಿ ಬೆರೆತು ಬಾಳಿದ್ದರ ಫಲವೇ ಅವರ ಈ ಸಾಹಿತ್ಯ ಎಂದರೆ ತಪ್ಪಾಗಲಾರದು ಹಳ್ಳಿಯ ಬದುಕಿನಲ್ಲಿ ಹಾಸುಹೊಕ್ಕಾಗಿ ಬಂದಿರುವ ಉತ್ಸವ, ಜಾತ್ರೆ, ಹಬ್ಬಹರಿದಿನ, ಅವುಗಳ ಅಂಗವಾಗಿಯೇ ಆಚರಿಸುವ ಕೆಲವು ಮನೋರಂಜನ ಕಾರ್ಯಕ್ರಮಗಳು ಇವುಗಳ ಒಂದು ಭಾಗವಾಗಿಯೇ ಬರುವ ಕೋಲಾಟ, ಬಯಲಾಟ, ಯಕ್ಷಗಾನ- ಇವುಗಳನ್ನು ಕಲಿತು ಅಭಿನಯಿಸುವಾಗ ಆಗುವ ಅನೌಚಿತ್ಯಗಳು ಎಲ್ಲವನ್ನು ಸಹ ಹಾಸ್ಯ ಲೇಪಿತ ವರ್ಣನೆಯ ಮೂಲಕವೇ ವಿವರಿಸುತ್ತಾರೆ. ಜೊತೆಗೆ ಜನರ ನಡವಳಿಕೆ ಆಚಾರ-ವಿಚಾರಗಳು ಇವುಗಳನ್ನು ಬಹಳ ಸೂಕ್ಷ್ಮವಾಗಿ ಗಮನಿಸಿ ನಿಸರ್ಗ ಸಹಜವಾಗಿಯೇ ಚಿತ್ರಿಸುತ್ತಾರೆ.

ತಮ್ಮ ಗ್ರಾಮದ ಬಗೆಗೆ, ಆ ಗ್ರಾಮದ ಜೀವನಾಡಿಯಾದ ಹೇಮಾವತಿನದಿಯ ಬಗೆಗೆ, ತಮ್ಮ ಊರಿನ ರಸಿಕರ ಬಗೆಗೆ ಲೇಖಕರಿಗೆ ಎಲ್ಲಿಲ್ಲದ ಪ್ರೀತಿ, ತಾವು ಕಂಡು ಅನುಭವಿಸಿದ ಪ್ರತಿ ಘಟನೆಯನ್ನೂ ಮನಮುಟ್ಟುವಂತೆ ಬಣ್ಣಿಸುವ ಸಹಜ ಕಲೆಗಾರರವರು. ಬ್ರಾಹ್ಮಣ ಸಮಾಜದಲ್ಲಿ ಬೇರು ಬಿಟ್ಟಿರುವ ಮೂಢನಂಬಿಕೆಗಳು, ಕಂದಾಚಾರಗಳು, ಅರ್ಥವಿಲ್ಲದ ಆಚರಣೆಗಳನ್ನು ಅಷ್ಟೆ ಸಹಜವಾಗಿ ವಿಡಂಬಿಸುತ್ತಾರೆ.

ಜನಪದ ಸಂಸ್ಕೃತಿಯ ಬಗೆಗೆ ಗೊರೂರರಿಗೆ ವಿಶೇಷವಾದ ಅಭಿಮಾನ ಹಾಗಾಗಿಯೇ ಅವರು ತಮ್ಮ ಸುತ್ತಿನ ಗ್ರಾಮದ ಬದುಕನ್ನು ಪ್ರೀತಿ ಆದರಗಳಿಂದ, ಹೆಮ್ಮೆಯಿಂದ ಪಡಿಮೂಡಿಸುತ್ತಾರೆ. ನಾಗರೀಕತೆಗೆ ಒಳಗಾಗಿ ಇಂದು ಸಂಪೂರ್ಣವಾಗಿ ಬದಲಾಗುತ್ತಿರುವ ಇಂದಿನ

ಪೀಳಿಗೆಗೆ ಗೊರೂರರ ಕೃತಿಗಳ ಗ್ರಾಮೀಣ ಚಿತ್ರಣ ಆಶ್ಚರ್ಯ ಮೂಡಿಸುವುದರಲ್ಲಿ ಅತಿಶಯವಿಲ್ಲ ಎನಿಸುತ್ತದೆ. ತಾನೂ ನಕ್ಕು, ಓದುಗರನ್ನು ನಗಿಸಿ ಆ ಮೂಲಕ ನಗುವುದನ್ನು ಕಲಿಸಿದ ಮಹಾಪುರುಷರಿವರು.

ಜೀವನದ ಬಗೆಗಿನ ಸಹಾನುಭೂತಿ, ಸ್ವಚ್ಛ ಸರಳ ಸ್ವಾಭಾವಿಕವಾದ ವರ್ಣನೆಯ ರೀತಿ, ತಮ್ಮ ಹಾಸ್ಯ ಮನೋಧರ್ಮದಲ್ಲಿಯೂ ಮಿತಿಯನ್ನು ಮೀರದ ಅವರ ಜಾಣ್ಮೆ. ಯಾವುದೇ ಒಂದು ತತ್ತ್ವ ಸಿದ್ಧಾಂತಕ್ಕೆ ಒಳಪಡದ, ಪ್ರತಿಮೆ, ಸಂಕೇತಗಳ ಬಳಕೆಯಿಲ್ಲದ ಇಂತಹ ವಿಶೇಷ ಗುಣಗಳಿಂದಾಗಿ ಇವರ ಕೃತಿಗಳು ಹೊಸಗನ್ನಡ ಸಾಹಿತ್ಯದಲ್ಲಿ ಗೊರೂರರನ್ನು ಮೇಲಿನ ಸ್ಥರಕ್ಕೇರಿಸಿವೆ.

ಶಿಷ್ಟ ಸಾಹಿತ್ಯ ಜನಪದ ಸಾಹಿತ್ಯ ಎರಡರಲ್ಲಿಯೂ ಕೃಷಿ ಮಾಡಿದ ಅವರ ಕಲೆ ಪ್ರಜ್ಞಾಪೂರ್ವಕವಾಗಿ ಬಂದದ್ದಲ್ಲ ಸಹಜವಾಗಿ ಬಂದಂತಹ ಕಲೆಯಾಗಿದೆ. ಅವರ ಶಿಷ್ಟ ಸಾಹಿತ್ಯವೂ ಕೂಡ ಜನಪದ ಸಾಹಿತ್ಯದಿಂದಲೇ ಸ್ಫೂರ್ತಿ ಪ್ರೇರಣೆಗಳನ್ನು ಪಡೆದುದಾಗಿದೆ. ಇಂತಹ ಸ್ಫೂರ್ತಿಯಿಂದಾಗಿ ಬಂದಂತಹ ಬರಹವು ಜೀವನದ ರಸಘಟ್ಟಗಳನ್ನು ಎತ್ತಿ ತೋರಿಸಿ ಅಮರವಾಗುಳಿದಿದೆ.

ಇಂತಹ ಒಬ್ಬ ವಿಶೇಷ ಸಾಹಿತಿಯ ಪ್ರಬಂಧಗಳನ್ನು ನಿಬಂಧ ರಚನೆಗೆ ಆರಿಸಿಕೊಂಡು, ವಿವಿಧ ಅಧ್ಯಾಯಗಳಾಗಿ ವಿಭಾಗಿಸಿ ಅವುಗಳ ವಿಶೇಷತೆಯನ್ನು ಗುರುತಿಸುವ ಪ್ರ ಯತ್ನವನ್ನು ಮಾಡಲಾಗಿದೆ.

ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಗಳನ್ನು ತಿಳಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಬದುಕು ಬರಹಗಳ ಸಂಕ್ಷಿಪ್ತ ಪರಿಚಯವನ್ನು ಮಾಡಿಕೊಡಲಾಗಿದೆ. ಮೂರನೆಯ ಅಧ್ಯಾಯದಲ್ಲಿ ಪ್ರಬಂಧದ ಸ್ವರೂಪ ವಿನ್ಯಾಸದ ಬಗೆಗಿನ ವಿವರಗಳನ್ನು ತಕ್ಕ ಮಟ್ಟಿಗೆ ಪರಿಚಯಿಸಲಾಗಿದೆ. ನಾಲ್ಕನೆಯ ಅಧ್ಯಾಯದಲ್ಲಿ ಗೊರೂರರ ಪ್ರಬಂಧಗಳಲ್ಲಿ ಬಳಕೆಯಾಗಿರುವ ವಸ್ತುವಿನ ವೈವಿಧ್ಯತೆ ಕಥಾವಿನ್ಯಾಸದ ವಿಚಾರಗಳ ಬಗೆಗೆ ಅಭ್ಯಸಿಸಿ ಅವುಗಳನ್ನು ಗುರುತಿಸಿ, ವಿವರಿಸಲು ಪ್ರಯತ್ನಿಸಲಾಗಿದೆ ಹಾಗೆಯೇ ಐದನೆಯ ಅಧ್ಯಾಯದಲ್ಲಿ ಗೊರೂರರ ಪ್ರಬಂಧಗಳಲ್ಲಿನ ಪಾತ್ರಗಳ ಬಗೆಗಿನ ವಿವೇಚನೆಯಿದ್ದು, ಪ್ರಮುಖವಾಗಿ ಕಂಡುಬರುವ ಪಾತ್ರಗಳನ್ನು ಗುರುತಿಸಿ ಅವುಗಳ ಗುಣವಿಶೇಷಗಳ ಬಗೆಗೆ ತಿಳಿಸಲಾಗಿದೆ. ಆರನೆಯ ಅಧ್ಯಾಯದಲ್ಲಿ ಪ್ರಬಂಧಗಳಲ್ಲಿ ಬಳಕೆಯಾಗಿರುವ ಭಾಷೆ, ಶೈಲಿ, ಅಭಿವ್ಯಕ್ತಿಯನ್ನು ಕುರಿತು ನಿದರ್ಶನಗಳ ಮೂಲಕ ತಿಳಿಸುವ ಪ್ರಯತ್ನವನ್ನು ಮಾಡಲಾಗಿದೆ. ಏಳನೆಯ ಅಧ್ಯಾಯದಲ್ಲಿ

ಗೊರೂರರ ಕೃತಿಗಳ ವೈಶಿಷ್ಟವೆನಿಸಿದ ಹಾಸ್ಯ ಪ್ರಸಂಗಗಳನ್ನು ಅವುಗಳ ಪ್ರಾಮುಖ್ಯತೆಯನ್ನು ಕುರಿತು ಅಭ್ಯಸಿಸಿ ದಾಖಲಿಸುವ ಕೆಲಸವನ್ನು ಮಾಡಲಾಗಿದೆ. ಎಂಟನೆಯ ಅಧ್ಯಾಯದಲ್ಲಿ ಗ್ರಾಮ ಜೀವನದ ಅವಿಭಾಜ್ಯ ಅಂಗವಾದ ಜನಪದ ಸಂಸ್ಕೃತಿಗಳ ಬಗೆಗೆ ಲೇಖಕರಿಗಿದ್ದ ಆಸಕ್ತಿ, ಅಭಿರುಚಿ, ಕೃತಿಗಳಲ್ಲಿ ಅವರು ದಾಖಲಿಸಿರುವ ಪ್ರಸಂಗಗಳು ಮುಂತಾದವುಗಳ ಬಗೆಗೆ ತಿಳಿಸಲು ಪ್ರಯತ್ನಿಸಲಾಗಿದೆ. ಒಂಭತ್ತನೆಯ ಅಧ್ಯಾಯದಲ್ಲಿ ಈ ಪ್ರಬಂಧಗಳ ಸಾಹಿತ್ಯಕ ಪ್ರಾಮುಖ್ಯತೆಯ ಬಗೆಗೆ ಅಭಿಪ್ರಾಯವನ್ನು ವ್ಯಕ್ತಪಡಿಸಲಾಗಿದೆ.

ಈ ನಿಬಂಧ ರಚನೆಯಲ್ಲಿ ಅಧ್ಯಯನ ನಡೆಸಿ ದಾಖಲಿಸಿರುವ ಚಿಂತನೆ, ಅಭಿಪ್ರಾಯಗಳೇ ಅಂತ್ಯವಾಗಿರುವುದಿಲ್ಲ. ಈ ಅನಿಸಿಕೆಗಳನ್ನು ಮೀರಿ ಚಿಂತಿಸುವ, ಅಧ್ಯಯನ ನಡೆಸುವ ಅವಕಾಶವಿರಬಹುದು. ಹಾಗಾಗಿ ಮುಂದಿನ ಅಧ್ಯನಕಾರರ ಅಧ್ಯಯನಕ್ಕೂ ಇದು ಅವಕಾಶ ನೀಡುತ್ತವೆಂಬುದರಲ್ಲಿ ಸಂಶಯವಿಲ್ಲ.

ಒಟ್ಟಿನಲ್ಲಿ ಇಂದು ಮರೆಯಾಗುತ್ತಿರುವ ಗ್ರಾಮೀಣ ಜೀವನದ ವೈವಿಧ್ಯಮಯ ಚಿತ್ರಣವನ್ನು ಇಂದಿಗೂ ಕಣ್ಣಿಗೆಕಟ್ಟುವಂತೆ ಚಿತ್ರಿಸಿರುವ ಈ ಪ್ರಬಂಧಗಳು ಅಧ್ಯನಕ್ಕೆ ಯೋಗ್ಯವಾದ ಕೃತಿಗಳಾಗಿದ್ದು, ಈ ನಿಬಂಧ ರಚನೆಯು ಸಂತೋಷವನ್ನು ನೀಡಿದ್ದು ಈ ವಿಷಯದ ಆಯ್ಕೆ ಉತ್ತಮವಾದುದು ಎನಿಸಿದೆ.

# ಗ್ರಂಥಋಣ


| ಕ್ರ.ಸಂ | ಕೃತಿ | ಲೇಖಕರು | ಪ್ರಕಾಶನ |
|---|---|---|---|
| ೧ | ಕನ್ನಡ ಸಾಹಿತ್ಯ ಚರಿತ್ರೆ | ತ ಸು ಶಾಮಾರಾಯ | ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಮೂರನೇ ಹಂತ . ಮೈಸೂರು -೨ ಮುದ್ರಣ - ೨೦೦೧ |
| ೨ | ಗೊರೂರು ರಾಮಸ್ವಾಮಿ ಯ್ಯಂಗಾರ್ | ಡಾ\|\| ಪ್ರಧಾನ ಗುರುದತ್ತ | ನವಕರ್ನಾಟಕ ಪಬ್ಲಿಕೇಶನ್ಸ್ , ಪ್ರೈವೇಟ್ ಲಿಮಿಟೆಡ್. ಎಂ.ಬಿ.ಸಿ.ಸೆಂಟರ್. ಕ್ರೆಸೆಂಟ್ ರಸ್ತೆ, ಬೆಂಗಳೂರು ೫೬೦೦೦೧ ಮುದ್ರಣ-೨೦೦೬ |
| ೩ | ಡಾ\|\| ಗೊರೂರು ಜೀವನ ಸಾಧನೆ | ಡಾ\|\| ಸಿ.ಜಿ.ವೆಂಕಟಯ್ಯ | ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ೧೪/೩, ನೃಪತುಂಗ ರಸ್ತೆ, ಬೆಂಗಳೂರು-೫೬೦೦೦೨ ಮುದ್ರಣ- ೧೯೯೪ |
| ೪ | ಗರುಡಗಂಬದ ದಾಸಯ್ಯ | ಗೊರೂರು ರಾಮಸ್ವಾಮಿ ಅಯ್ಯಂಗಾರ್ | ಐಬಿ.ಎಚ್.ಪ್ರಕಾಶನ, ೬೪೫/೬ ೧೦ ನೇ 'ಬಿ' ಮುಖ್ಯರಸ್ತೆ. ಅನೇ ಬ್ಲಾಕ್ ಜಯನಗರ , ಬೆಂಗಳೂರು,ಮುದ್ರಣ : ೨೦೦೪ |
| ೫ | ನಮ್ಮ ಊರಿನ ರಸಿಕರು | ಗೊರೂರು ರಾಮಸ್ವಾಮಿ ಅಯ್ಯಂಗಾರ್ | ಐಬಿ.ಎಚ್.ಪ್ರಕಾಶನ, ೬೪೫/೬ ೧೦ ನೇ 'ಬಿ' ಮುಖ್ಯರಸ್ತೆ. ಅನೇ ಬ್ಲಾಕ್ ಜಯನಗರ , ಬೆಂಗಳೂರು,ಮುದ್ರಣ : ೨೦೦೬ |

| | | | |
|---|---|---|---|
| ೬ | ಬೆಸ್ತರ ಕರಿಯ | ಗೊರೂರು ರಾಮಸ್ವಾಮಿ ಅಯ್ಯಂಗಾರ್ | ಕಾವ್ಯಾಲಯ ಪ್ರಕಾಶಕರು , ಜಯನಗರ ಮೈಸೂರು . ಟೆಕ್ ಪ್ರಿಂಟರ್ಸ್, ಮುದ್ರಣ -೧೯೯೭ |
| ೭ | ಬೆಟ್ಟದ ಮನೆಯಲ್ಲಿ ಇತರ ಪ್ರಬಂಧಗಳು | ಐಬಿ.ಎಚ್.ಪ್ರಕಾಶನ, ೬೪೫/೬ ೧೦ ನೇ 'ಬ' ಮುಖ್ಯರಸ್ತೆ. ४ನೇ ಬ್ಲಾಕ್ ಜಯನಗರ , ಬೆಂಗಳೂರು,ಮುದ್ರಣ : ೨೦೦೪ | ಶಾರದಾ ಮಂದಿರ ಪ್ರಕಾಶಕರು ಶ್ರೀ ಸದ್ಗುರು ಪ್ರಿಂಟರ್ಸ್, ರಾಮಾನುಜ ರಸ್ತೆ, ಮೈಸೂರು . ಮುದ್ರಣ -೧೯೮೯ |
| ೮ | ಹೇಮಾವತಿ ತೀರದಲ್ಲಿ ಇತರ ಪ್ರಬಂಧಗಳು | ಗೊರೂರು ರಾಮಸ್ವಾಮಿ ಅಯ್ಯಂಗಾರ್ | ಶ್ರೀ ಸದ್ಗುರು ಪ್ರಿಂಟರ್ಸ್, ರಾಮಾನುಜ ರಸ್ತೆ, ಮೈಸೂರು . ಮುದ್ರಣ -೧೯೮೧ |
| ೯ | ಹಳ್ಳಿಯ ಚಿತ್ರಗಳು | ಗೊರೂರು ರಾಮಸ್ವಾಮಿ ಅಯ್ಯಂಗಾರ್ | ಶಂಕರ ಮುದ್ರಣಾಲಯ , ಅವಿನ್ಯೂ ರಸ್ತೆ, ಬೆಂಗಳೂರು .ಮುದ್ರಣ - ೧೯೫೩ |

